## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 832
2. ಮಾನ್ಯ ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ. (ಹೊಳೇನರಸೀಪುರ)
3. ಉತ್ತರಿಸಬೇಕಾದ ದಿನಾಂಕ : 10/12/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ಲಾಕ್‌ಡೌನ್ ಅವಧಿಯಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗಾಗಿ ಯಾವ ಯಾವ ರೀತಿಯಲ್ಲಿ ಹಣವನ್ನು ಖರ್ಚು ಮಾಡಲಾಗಿದೆ: ಬೀದಿ ಬದಿ ವ್ಯಾಪಾರಿಗಳು, ಹೂ ಹಣ್ಣು ಮತ್ತು ತರಕಾರಿ ವ್ಯಾಪಾರಸ್ಥರು, ಕ್ಷೌರಿಕರು, ಕಂಬಾರರು ನೇಕಾರರು, ಬೀಡಿ ಕಾರ್ಮಿಕರು ಹಾಗೂ ಇತರೆ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ವಲಯಗಳಿಗೆ ಖರ್ಚು ಮಾಡಿರುವ ಹಣದ ಸಂಪೂರ್ಣ ಮಾಹಿತಿಯನ್ನು ನೀಡುವುದು: | **I ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಕೋವಿಡ್-19ರ ಹಿನ್ನೆಲೆಯಲ್ಲಿ ಅಸಂಘಟಿತ ಕಾರ್ಮಿಕರಿಗೆ ಸಂಬಂಧಿಸಿದಂತೆ ಕೈಗೊಳ್ಳಲಾದ ಕ್ರಮಗಳು ಈ ಕೆಳಕಂಡಂತಿದೆ:<br>**ಅ) ಅಗಸರು ಹಾಗೂ ಕ್ಷೌರಿಕರಿಗೆ ರೂ.5000/-ಗಳ ಒಂದು ಬಾರಿಯ ನೆರವು:**<br>➢ ಸನ್ಮಾನ್ಯ ಮುಖ್ಯ ಮಂತ್ರಿಗಳು ಘೋಷಿಸಿದಂತೆ ಕೋವಿಡ್-19 ಸಂಕಷ್ಟ ಪರಿಸ್ಥಿತಿಯಲ್ಲಿ ತೊಂದರೆಗೀಡಾದ ಅಗಸರು ಮತ್ತು ಕ್ಷೌರಿಕರಿಗೆ ತಲಾ ರೂ. 5,000/-ಗಳ ಒಂದು ಬಾರಿಯ ನೆರವನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಜಾರಿಗೊಳಿಸಲಾಗಿದೆ.<br>➢ ಈವರೆಗೆ 74,782 ಅಗಸರು ಮತ್ತು 66,820 ಕ್ಷೌರಿಕ ವೃತ್ತಿಯ ಕಾರ್ಮಿಕರು ಸೇರಿದಂತೆ ಒಟ್ಟು 1,41,602 ಅರ್ಜಿಗಳನ್ನು ಸ್ವೀಕರಿಸಲಾಗಿದೆ.<br>➢ ಅವುಗಳಲ್ಲಿ 1,19,642 ಅರ್ಜಿದಾರರಿಗೆ ಘೋಷಿತ ನೆರವಿನ ಮೊತ್ತ ತಲಾ ರೂ.5,000/-ದಂತೆ ಒಟ್ಟು ರೂ.59,82,10,000/-ಗಳನ್ನು DBT ಮೂಲಕ ಅವರವರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗಿದೆ.<br>➢ ತಾಂತ್ರಿಕ ಕಾರಣಗಳಿಂದ, ಅಗತ್ಯ ಮಾಹಿತಿ ಒದಗಿಸದ ಹಾಗೂ ಷರತ್ತುಗಳನ್ನು ಪೂರೈಸದಿರುವ 14,719 ಅರ್ಜಿಗಳು ಬಾಕಿಯಿದ್ದು, ಸದರಿ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಅರ್ಹ ಕಾರ್ಮಿಕರಿಗೆ ಘೋಷಿತ ನೆರವಿನ ಮೊತ್ತವನ್ನು ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ.<br>**(ಆ) ಇತರೆ ಕ್ರಮಗಳು :**<br>➢ ಕೋವಿಡ್-19 ರಿಂದ ರಕ್ಷಣೆ ಪಡೆಯಲು ಮಾಸ್ಕ್, ಸಾಬೂನು, ಸ್ಯಾನಿಟೈಸರ್‌ಗಳನ್ನು ಒದಗಿಸಲು ಹಾಗೂ ಸಂಬಂಧಪಟ್ಟವರಲ್ಲಿ ಅರಿವು ಮೂಡಿಸಲು ಮತ್ತು ಸಂವಹನ ಚಟುವಟಿಕೆಗಳಿಗಾಗಿ ಪ್ರತಿ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ತಲಾ ರೂ.5 ಲಕ್ಷಗಳಂತೆ 41 ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ಒಟ್ಟು ರೂ.2.05 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ. |

| | | |
|---|---|---|
| | | ➢ ಸಂಕಷ್ಟಕ್ಕೊಳಗಾದ ಅಸಂಘಟಿತ ಕಾರ್ಮಿಕರಿಗೆ ಊಟೋಪಚಾರ, ವಸತಿ ಇತ್ಯಾದಿ ಸೌಕರ್ಯಗಳನ್ನು ಒದಗಿಸಲು ವ್ಯವಸ್ಥೆ ಮಾಡಿದ ಸಮುದಾಯ ಭವನ / ಕಲ್ಯಾಣ ಮಂಟಪ / ಖಾಸಗಿ ಕಲ್ಯಾಣ ಮಂಟಪಗಳ ವೆಚ್ಚವನ್ನು ಭರಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಕಾರ್ಮಿಕರ ಅಧ್ಯಯನ ಸಂಸ್ಥೆಗೆ ರೂ.1.00 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ.<br>➢ ಅಸಂಘಟಿತ ಕಾರ್ಮಿಕರನ್ನು ಕೊರೋನಾ ವೈರಸ್ ಸೋಂಕಿನಿಂದ ತಡೆಯಲು ಅರಿವು ಮೂಡಿಸಲು ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರೂ.25 ಲಕ್ಷಗಳನ್ನು ಮೆ॥ ಎಂ.ಸಿ. & ಎ ಸಂಸ್ಥೆಗೆ ಬಿಡುಗಡೆಗೊಳಿಸಲಾಗಿದೆ.<br>➢ ಬೆಂಗಳೂರು ಮತ್ತು ರಾಜ್ಯದಾದ್ಯಂತ ಸಂಕಷ್ಟಕ್ಕೊಳಗಾದ ಅಸಂಘಟಿತ ವಲಯಕ್ಕೆ ಸೇರಿದ ಎಲ್ಲಾ ವಲಸೆ ಕಾರ್ಮಿಕರನ್ನು (ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರನ್ನು ಹೊರತುಪಡಿಸಿ) ಗುರುತಿಸಿ, ಸಿದ್ಧಪಡಿಸಿದ ಆಹಾರ ಹಾಗೂ ಪಡಿತರ ಕಿಟ್ ಅನ್ನು ವಿತರಿಸಲು ತಗಲಿರಬಹುದಾದ ಅಂದಾಜು ವೆಚ್ಚ ರೂ. 5.00 ಕೋಟಿ (ಐದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ಮರುಪಾವತಿಸಲಾಗಿದೆ.<br>➢ ಕೋವಿಡ್-19ರ ಕಾರಣ, ಕರ್ನಾಟಕದಿಂದ ಇತರೆ ರಾಜ್ಯಗಳಿಗೆ ತೆರಳುತ್ತಿರುವ ಹಾಗೂ ಇತರೆ ರಾಜ್ಯಗಳಿಂದ ಕರ್ನಾಟಕಕ್ಕೆ ಬರಲಿಚ್ಛಿಸುವ ವಲಸೆ ಕಾರ್ಮಿಕರಿಗೆ ಸಹಾಯ ಮಾಡಲು, ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಮತ್ತು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಂಟಿಯಾಗಿ 24/7 ಉಚಿತ ಸಹಾಯವಾಣಿಯನ್ನು ತೆರೆಯಲಾಗಿದ್ದು, 2 ಮಂಡಳಿಯು ಸಹಾಯವಾಣಿಗೆ ತಗಲು ವೆಚ್ಚವನ್ನು ಸಮಪ್ರಮಾಣದಲ್ಲಿ ಭರಿಸುವಂತೆ ಸರ್ಕಾರವು ಸೂಚಿಸಿರುತ್ತದೆ. ಪ್ರಸ್ತುತ ಸದರಿ ಉದ್ದೇಶಕ್ಕಾಗಿ ಒಟ್ಟು ರೂ. 77,98,964/- ಗಳನ್ನು ವೆಚ್ಚ ಮಾಡಲಾಗಿದೆ.<br><br>**II ತೋಟಗಾರಿಕೆ ಇಲಾಖೆ**<br><br>ಕೋವಿಡ್ 19 ಲಾಕ್ ಡೌನ್ ಅವಧಿಯಲ್ಲಿ ನಷ್ಟಕ್ಕೊಳಗಾದ ಹೂ, ಹಣ್ಣು ಮತ್ತು ತರಕಾರಿ ಬೆಳೆಗಾರರು/ರೈತರಿಗೆ ಮಾತ್ರ ಪರಿಹಾರಧನ ವಿತರಿಸಲಾಗುತ್ತಿದ್ದು, ಹೂ, ಹಣ್ಣು ಮತ್ತು ತರಕಾರಿ ವ್ಯಾಪಾರಸ್ಥರಿಗೆ ಪರಿಹಾರಧನ ವಿತರಿಸುವ ಕಾರ್ಯಕ್ರಮಗಳು ಇರುವುದಿಲ್ಲ.<br><br>**III ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ**<br><br>➢ ರಾಜ್ಯದಲ್ಲಿನ ಕೈಮಗ್ಗ ನೇಕಾರಿಗೆ **"ನೇಕಾರ ಸಮ್ಮಾನ್ ಯೋಜನೆ"** ಯನ್ನು ಘೋಷಿಸುವ ಮೂಲಕ ಪ್ರತಿ ಕೈಮಗ್ಗ ನೇಕಾರರಿಗೆ ವಾರ್ಷಿಕ ರೂ.2,000/- ಗಳ ಆರ್ಥಿಕ ನೆರವನ್ನು ನೇರ ನಗದು ವರ್ಗಾವಣೆ ಮುಖಾಂತರ ನೀಡಲು ಆದೇಶವನ್ನು ಹೊರಡಿಸಲಾಗಿರುತ್ತದೆ. |

| | | |
|---|---|---|
| | | ➢ ಸದರಿ ಯೋಜನೆಯಡಿ ಇದುವರೆಗೆ 50511 ನೇಕಾರರು ಅರ್ಜಿಗಳನ್ನು ನೊಂದಾಯಿಸಿದ್ದು, ಇದುವರೆಗೆ 46259 ನೇಕಾರರಿಗೆ ರೂ.925.18 ಲಕ್ಷಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ವರ್ಗಾಯಿಸಲಾಗಿರುತ್ತದೆ.<br>➢ **"ಕೋವಿಡ್-19 ಪ್ರಯುಕ್ತ ವಿದ್ಯುತ್ ಮಗ್ಗ ನೇಕಾರರಿಗೆ ಆರ್ಥಿಕ ಬೆಂಬಲ ನೀಡುವ"** ಸಂಬಂಧ ರಾಜ್ಯದಲ್ಲಿರುವ 1.25 ಲಕ್ಷ ವಿದ್ಯುತ್ ಚಾಲಿತ ಮಗ್ಗಗಳಲ್ಲಿ ಪ್ರತಿ ವಿದ್ಯುತ್ ಚಾಲಿತ ಮಗ್ಗಗಳಲ್ಲಿ ಕೆಲಸ ಮಾಡುತ್ತಿರುವ ಒಬ್ಬ ಕೂಲಿ ಕಾರ್ಮಿಕರಿಗೆ ಒಂದು ಬಾರಿಗೆ ಮಾತ್ರ ಅನ್ವಯಿಸುವಂತೆ ರೂ.2,000/- ಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ನೀಡಲು ಆದೇಶವನ್ನು ಹೊರಡಿಸಲಾಗಿರುತ್ತದೆ.<br>➢ ಸದರಿ ಯೋಜನೆಯಡಿ ಇದುವರೆಗೆ 56449 ನೇಕಾರರು ಅರ್ಜಿಗಳನ್ನು ನೊಂದಾಯಿಸಿದ್ದು, ಇದುವರೆಗೆ 48004 ನೇಕಾರರಿಗೆ ರೂ.960.08 ಲಕ್ಷಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ವರ್ಗಾಯಿಸಲಾಗಿರುತ್ತದೆ.<br>**IV ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**<br>➢ ಕೋವಿಡ್-19 ಲಾಕ್‌ಡೌನ್ ಸಮಯದಲ್ಲಿ ಸಂಕಷ್ಟಕೊಳಗಾದ ಕಟ್ಟಡ ಕಾರ್ಮಿಕರಿಗೆ ತಲಾ ರೂ.5,000/- ಗಳ ಪರಿಹಾರವನ್ನು ಸರ್ಕಾರ ಘೋಷಣೆ ಮಾಡಿರುತ್ತದೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯಲ್ಲಿ ನೋಂದಣಿಯಾದ 16,48,431 ಕಟ್ಟಡ ಕಾರ್ಮಿಕರು ಈ ಸೌಲಭ್ಯವನ್ನು ಪಡೆದಿದ್ದು, ಇದಕ್ಕಾಗಿ 824.21 ಕೋಟಿ ಮೊತ್ತವನ್ನು ಖರ್ಚು ಮಾಡಲಾಗಿರುತ್ತದೆ. |
| ಆ) | ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕ ಕಲ್ಯಾಣಕ್ಕಾಗಿ ಸರ್ಕಾರ ಯಾವ ಯಾವ ಯೋಜನೆಗಳನ್ನು ರೂಪಿಸಿದೆ (ಸಂಪೂರ್ಣ ಮಾಹಿತಿ ನೀಡುವುದು): | **I. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br>1) ಸಂಘಟಿತ ವಲಯದ ಕಾರ್ಮಿಕರಿಗೆ ಕರ್ನಾಟಕ ಕಲ್ಯಾಣ ಮಂಡಳಿ ವತಿಯಿಂದ ಕಲ್ಯಾಣ ಯೋಜನೆಗಳನ್ನು ರೂಪಿಸಲಾಗಿದೆ. ಸದರಿ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಯೋಜನೆಗಳು ಜಾರಿಯಲ್ಲಿರುತ್ತವೆ.<br>1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2. ವೈದ್ಯಕೀಯ ನೆರವು.<br>3. ಅಪಘಾತ ಧನ ಸಹಾಯ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ.<br>6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ.<br>ಈ ಮೇಲ್ಕಂಡ ಯೋಜನೆಗಳ ವಿವರವಾದ ಮಾಹಿತಿ **ಅನುಬಂಧ-1** ರಲ್ಲಿ |

ಒದಗಿಸಿದೆ.

**II. <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u>**

ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಮಂಡಳಿಯು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

**2) <u>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ</u>:-** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.

(ಅ) **<u>ಅಪಘಾತ ಪರಿಹಾರ ಸೌಲಭ್ಯ</u>:** ಯೋಜನೆಯಡಿ, ಅಪಘಾತದಿಂದಾದ ಮರಣ ಪ್ರಕರಣಗಳಲ್ಲಿ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೂ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.

(ಆ) **<u>ಶೈಕ್ಷಣಿಕ ಧನ ಸಹಾಯ</u>:** ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

(ಇ) **<u>ಸ್ಮಾರ್ಟ್ ಕಾರ್ಡ್ ಸೌಲಭ್ಯ</u>:** ಯೋಜನೆಯ ಕುರಿತು ಫಲಾನುಭವಿಗಳಲ್ಲಿ ಜಾಗೃತಿ ಮೂಡಿಸಲು ಎಲ್ಲಾ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.

(ಈ) **<u>ಶ್ರಮ ಸಮ್ಮಾನ ಪ್ರಶಸ್ತಿ</u> :**

- ಪ್ರತಿ ವರ್ಷ ಸರ್ಕಾರದ ಆದೇಶದಂತೆ, 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, ಉತ್ತಮ ಹಾಗೂ ಸುರಕ್ಷತಾ ಚಾಲನೆ ಮಾಡಿದ ತ್ರಿಚಕ್ರ ಹಾಗೂ ನಾಲ್ಕು ಚಕ್ರದ ವಾಹನ ಚಾಲಕರಿಗೆ ಪ್ರತಿ ಜಿಲ್ಲೆಗೆ ಪ್ರತ್ಯೇಕವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು ರಾಜ್ಯಾದ್ಯಂತ 660 ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.
- ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.

(ಉ) **<u>ಅಪಘಾತ ಜೀವ ರಕ್ಷಕ</u>:-** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ

| | | |
|---|---|---|
| | | ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br><br>(3) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ</u>:-<br><br>(ಅ) <u>"ಸ್ಮಾರ್ಟ್ ಕಾರ್ಡ್"</u>:- ಯೋಜನೆಯಡಿ 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.<br>(ಆ) <u>ಶ್ರಮ ಸಮ್ಮಾನ ಪ್ರಶಸ್ತಿ:</u><br>➢ ಪ್ರತಿ ವರ್ಷ, ಸರ್ಕಾರದ ಆದೇಶದಂತೆ, 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವಲಯಗಳಲ್ಲಿ ವಿಶೇಷ ಸಾಧನೆ ಮಾಡಿದ ಕಾರ್ಮಿಕರನ್ನು ಗುರುತಿಸಿ, ಪ್ರತಿಯೊಂದು ಜಿಲ್ಲೆಗೆ ಪ್ರತಿಯೊಂದು ವಲಯಕ್ಕೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು 3630 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.<br>➢ ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.<br>(ಇ) <u>ಕಾರ್ಮಿಕ ಸೇವಾ ಕೇಂದ್ರ</u> :-<br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅಸಂಘಟಿತ ಕಾರ್ಮಿಕರಿಗೆ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ |

| | | |
|---|---|---|
| | | ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.<br><br>3. (ಅ) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-** ಕೇಂದ್ರ ಸರ್ಕಾರದ ಈ ಯೋಜನೆಯಡಿ 18 - 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ.<br><br>(ಆ) **ನ್ಯೂ ಪೆನ್ಷನ್ ಸ್ಕೀಮ್ ಫಾರ್ ಟ್ರೇಡರ್ಸ್ ಅಂಡ್ ಸೆಲ್ಫ್ ಎಂಪ್ಲಾಯ್ಡ್ ಪರ್ಸನ್ಸ್:-** ಈ ಯೋಜನೆಯಡಿ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು ಫಲಾನುಭವಿಗಳಾಗುತ್ತಾರೆ.<br><br>**III. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**<br><br>ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿದ್ದು, ಅವುಗಳ ವಿವರವನ್ನು **ಅನುಬಂಧ-2** ರಲ್ಲಿ ನೀಡಿದೆ. |
| ಇ) | ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕ ಕಲ್ಯಾಣ ನಿಧಿಗೆ ಕಳೆದ 5 ವರ್ಷಗಳಿಂದ ಸಂಗ್ರಹಿಸಿರುವ ಹಣವೆಷ್ಟು: ಈ ದಿನಾಂಕದವರೆಗೆ ಒಟ್ಟು ಎಷ್ಟು ಮೊಬಲಗು ಈ ನಿಧಿಯಲ್ಲಿದೆ: ಈ ಹಣವನ್ನು ಎಲ್ಲೆಲ್ಲಿ ಡೆಪಾಸಿಟ್ ಮಾಡಲಾಗಿದೆ: ಈ ರೀತಿ ಸಂಗ್ರಹಿಸಿರುವ ಹಣವನ್ನು ಯಾವ ಯಾವ ಉದ್ದೇಶಕ್ಕಾಗಿ ಖರ್ಚು ಮಾಡಲಾಗಿದೆ: ಖರ್ಚು ಮಾಡಿರುವ ಹಣದ ಸಂಪೂರ್ಣ ಮಾಹಿತಿಯನ್ನು ನೀಡುವುದು: | **I. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br><br>ಸದರಿ ಮಂಡಳಿಯಲ್ಲಿ ಯಾವುದೇ ನಿಧಿ ಸಂಗ್ರಹಿಸಲು ಅವಕಾಶವಿರುವುದಿಲ್ಲ.<br><br>**II. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br><br>➢ ರಾಜ್ಯದಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿಗೆ ಕಳೆದ 5 ವರ್ಷಗಳಲ್ಲಿ ಸಂಘಟಿತ ಕಾರ್ಮಿಕರು, ಮಾಲೀಕರು ಮತ್ತು ಸರ್ಕಾರದಿಂದ 20:40:20 ರ ಅನುಪಾತದಲ್ಲಿ ಒಟ್ಟು ರೂ.104 ಕೋಟಿ ಸಂಗ್ರಹಿಸಲಾಗಿದೆ.<br>➢ ಒಟ್ಟು ರೂ. 135 ಕೋಟಿ ಹಣವನ್ನು ವಿವಿಧ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿ ಇರಿಸಲಾಗಿದೆ. ಕಳೆದ 5 ವರ್ಷಗಳಲ್ಲಿ ಸಂಗ್ರಹಿಸಿದ ಹಣವನ್ನು ವೆಚ್ಚ ಮಾಡಿರುವ ವಿವರವನ್ನು **ಅನುಬಂಧ-3** ರಲ್ಲಿ ಲಗತ್ತಿಸಿದೆ.<br><br>**III. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ** |

<table>
<tr>
<td></td>
<td></td>
<td>

➢ ಮಂಡಳಿಯ ಕಾರ್ಮಿಕ ಕಲ್ಯಾಣ ನಿಧಿಯಲ್ಲಿ ಕಳೆದ 5 ವರ್ಷದಿಂದ ಅಂದರೆ 2015-16 ರಿಂದ ಇಲ್ಲಿಯವರೆಗೆ ರೂ.6180 ಕೋಟಿಯಷ್ಟು ಮೊತ್ತ ಸಂಗ್ರಹವಾಗಿರುತ್ತದೆ.<br>
➢ ಪ್ರಸ್ತುತ ದಿನಾಂಕದವರೆಗೆ ರೂ.7356.90 ಕೋಟಿಯಷ್ಟು ಮೊತ್ತ ಈ ನಿಧಿಯಲ್ಲಿರುತ್ತದೆ. ಈ ಹಣವನ್ನು ಈ ಕೆಳಗಿನಂತೆ ಈ ಕೆಳಕಂಡ ಬ್ಯಾಂಕ್‌ಗಳಲ್ಲಿ ಠೇವಣಿ ಮಾಡಲಾಗಿದೆ.
<table>
<tr><th>ಕ್ರ ಸಂ.</th><th>ಬ್ಯಾಂಕ್ ಮತ್ತು ಶಾಖೆ</th><th>ಠೇವಣಿ ಇಟ್ಟಿರುವ ಮೊತ್ತ (ರೂ. ಕೋಟಿಗಳಲ್ಲಿ)</th></tr>
<tr><td>1.</td><td>ಕೆನರಾ ಬ್ಯಾಂಕ್, ಹೊಂಬೇಗೌಡನಗರ ಶಾಖೆ, ಬೆಂಗಳೂರು</td><td>7007.27</td></tr>
<tr><td>2.</td><td>ಬ್ಯಾಂಕ್ ಆಫ್ ಇಂಡಿಯಾ, ವಿಶ್ವೇಶ್ವರಪುರಂ ಶಾಖೆ, ಬೆಂಗಳೂರು</td><td>302.76</td></tr>
<tr><td></td><td>ಒಟ್ಟು</td><td>7310.03</td></tr>
</table>
➢ ಈ ರೀತಿ ಸಂಗ್ರಹವಾದ ಮೊತ್ತವನ್ನು ಮಂಡಳಿಯಲ್ಲಿ ರೂಪಿಸಿರುವ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳಡಿ ಫಲಾನುಭವಿಗಳಿಗೆ ಸೌಲಭ್ಯಗಳನ್ನು ಒದಗಿಸಲು ಮತ್ತು ಮಂಡಳಿಯ ಆಡಳಿತಾತ್ಮಕ ಖರ್ಚುಗಳಿಗಾಗಿ ಖರ್ಚು ಮಾಡಲಾಗಿದೆ. ಖರ್ಚು ಮಾಡಿರುವ ಹಣದ ವಿವರಗಳು ಈ ಕೆಳಕಂಡಂತಿದೆ:
<table>
<tr><th>ಕ್ರ. ಸಂ.</th><th>ಖರ್ಚು ಮಾಡಲಾದ ಬಾಬ್ತು</th><th>ಮೊತ್ತ (ರೂ. ಕೋಟಿಗಳಲ್ಲಿ)</th></tr>
<tr><td>1.</td><td>ಆಡಳಿತಾತ್ಮಕ ಖರ್ಚು</td><td>106.43</td></tr>
<tr><td>2.</td><td>ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳು</td><td>713.71</td></tr>
<tr><td>3.</td><td>ಕೋವಿಡ್-19</td><td>911.18</td></tr>
<tr><td>4.</td><td>ಆದಾಯ ತೆರಿಗೆ ಪಾವತಿ</td><td>515.11</td></tr>
<tr><td>5.</td><td>ಬ್ಯಾಂಕ್ ಶುಲ್ಕ</td><td>0.75</td></tr>
<tr><td colspan="2">ಒಟ್ಟು</td><td>2247.21</td></tr>
</table>
</td>
</tr>
<tr>
<td>ಈ)</td>
<td>ಈ ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಮಕ್ಕಳಿಗಾಗಿ ಕಳೆದ 3 ವರ್ಷಗಳಿಂದ ಯಾವ ರೀತಿಯಲ್ಲಿ ಎಷ್ಟೆಷ್ಟು ಹಣವನ್ನು ಖರ್ಚು ಮಾಡಲಾಗಿದೆ. (ವರ್ಷಾವಾರು ಸಂಪೂರ್ಣ ಮಾಹಿತಿ ನೀಡುವುದು)?</td>
<td><u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u><br>
ಮಂಡಳಿಯು ಜಾರಿಗೊಳಿಸುತ್ತಿರುವ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಅಸಂಘಟಿತ ಕಾರ್ಮಿಕರ ವ್ಯಾಪ್ತಿಯಲ್ಲಿ ಬರುವ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ರೂ.10,000/-ಗಳ ಶೈಕ್ಷಣಿಕ ಸಹಾಯಧನವನ್ನು ನೀಡಲಾಗುತ್ತಿದೆ.</td>
</tr>
</table>

ಈವರೆಗೆ ಮಂಜೂರು ಮಾಡಲಾದ ಶೈಕ್ಷಣಿಕ ಧನ ಸಹಾಯದ ವಿವರ ಈ ಕೆಳಗಿನಂತಿದೆ:

| ವರ್ಷ | ಫಲಾನುಭವಿಗಳ ಸಂಖ್ಯೆ | ಪರಿಹಾರದ ಮೊತ್ತ |
|---|---|---|
| 2018–19 | 149 | 14,90,000/– |
| 2019–20 | 182 | 18,20,000/– |
| 2020–21 | 36 | 3,60,000/– |

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**

ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯವನ್ನು ಕಳೆದ ಮೂರು ವರ್ಷಗಳಲ್ಲಿ (2017–18 ರಿಂದ 2019–20 ವರೆಗೆ) ಒಟ್ಟು ರೂ.26.21 ಕೋಟಿ ಖರ್ಚು ಮಾಡಲಾಗಿದೆ. ವಿವರಗಳು ಈ ಕೆಳಕಂಡಂತಿದೆ.

| ವರ್ಷ | 2017–18 | 2018–19 | 2019–20 |
|---|---|---|---|
| ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 7,11,40,200 | 8,57,34,000 | 10,51,98,000 |

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**

ಮಂಡಳಿಯಲ್ಲಿ ನೋಂದಾಯಿತರಾಗಿರುವ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಕ್ಕಳಿಗಾಗಿ ಕಳೆದ 3 ವರ್ಷದಲ್ಲಿ ವಿವಿಧ ಸೌಲಭ್ಯದಡಿ 368.66 ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಲಾಗಿರುತ್ತದೆ. ವಿವರಗಳನ್ನು ಅನುಬಂಧ–4 ರಲ್ಲಿ ನೀಡಿದೆ.

ಕಾಇ 401 ಎಲ್ಇಟಿ 2020

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

# ಅನುಬಂಧ-1

## ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಯೋಜನೆಗಳ ವಿವರ:

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ನೆರವು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ನಿಧಿಯನ್ನು, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965 ಅಡಿಯಲ್ಲಿ ಸ್ಥಾಪಿಸಲಾಗಿದೆ. ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಸಂಸ್ಥೆಗಳು / ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಸಂಘಟಿತ ಕಾರ್ಮಿಕರು ಮತ್ತು, ಅವರ ಕುಟುಂಬದ ಅವಲಂಬಿತರ ಕ್ಷೇಮಾಭಿವೃದ್ಧಿಗೆ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಈ ಕೆಳಗಿನ ಯೋಜನೆಗಳು ಜಾರಿಯಲ್ಲಿರುತ್ತದೆ.

**ಫಲಾನುಭವಿಗಳು ಗಮನಿಸಬೇಕಾದ ಅಂಶಗಳು :-**

1. ಯೋಜನೆಯ ಸೌಲಭ್ಯ ಪಡೆಯಲು ಪ್ರತಿ ವರ್ಷ ಜನವರಿ 15 ರೊಳಗೆ ಕಾರ್ಮಿಕರು, ಮಾಲೀಕರು ರೂ. 20:40 ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಒಟ್ಟು ರೂ. 60/- ಗಳಂತೆ ವಂತಿಕೆಯನ್ನು ಕಾರ್ಮಿಕ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು.

2. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಆನ್‌ಲೈನ್ ಅರ್ಜಿ ಸಲ್ಲಿಸಬೇಕಾಗಿರುತ್ತದೆ.

3. ವಂತಿಗೆ ಪಾವತಿ ಮಾಡುವ ಸಂಸ್ಥೆಗಳು ಹಾಗೂ ಕಾರ್ಖಾನೆಗಳು www.klwb.karnataka.gov.in ಇಲ್ಲಿ ತಮ್ಮ ಸಂಸ್ಥೆಗಳನ್ನು ನೊಂದಾಯಿಸಿ ವಂತಿಗೆ ಪಾವತಿ ಮಾಡಬೇಕಾಗಿರುತ್ತದೆ.

4. ಫಲಾನುಭವಿಗಳ ಮಾಸಿಕ ಸಂಬಳ ರೂ. 15,000/- ಗಿಂತ ಮೀರಿರಬಾರದು. ವಯೋಮಿತಿ 18- 60

**ಸೌಲಭ್ಯಗಳ ವಿವರ :-**

1. **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ: ಪ್ರೌಢ ಶಾಲೆ,** (8 ರಿಂದ 10ನೇ ತರಗತಿವರೆಗೆ) ರೂ.3,000/ ಪಿಯುಸಿ/ಡಿಪ್ಲೊಮಾ/ಐಟಿಐ/ಟಿಸಿಹೆಚ್ ಇತ್ಯಾದಿ ರೂ.4,000/-ಪದವಿ ತರಗತಿಗೆ ರೂ.5,000/ ಸ್ನಾತಕೋತ್ತರ ಪದವಿ ತರಗತಿಗಳಿಗೆ ರೂ.6,000/- ಇಂಜಿನೀಯರಿಂಗ್/ವೈದ್ಯಕೀಯ ರೂ.10,000/-ಗಳ ಪ್ರೋತ್ಸಾಹ ಧನ ನೀಡಲಾಗುವುದು. **(ಅರ್ಜಿ ಸಲ್ಲಿಸಲು ಸಾಮಾನ್ಯ ವರ್ಗ ಶೇ.50 ಪ.ಜಾ / ಪ.ಪಂ ಶೇ. 45 ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು)**

2. **ಕಾರ್ಮಿಕರಿಗೆ ವೈದ್ಯಕೀಯ ನೆರವು :** ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಕ್ಯಾನ್ಸರ್, ಆಂಜಿಯೋಪ್ಲಾಸ್ಟಿ, ಕಣ್ಣು, ಅರ್ಥೋಪೆಡಿಕ್, ಗರ್ಭಕೋಶದ ಶಸ್ತ್ರ ಚಿಕಿತ್ಸೆ, ಗಾಲ್ ಬ್ಲಾಡರ್ ತೊಂದರೆ, ಮೆದುಳಿನ ರಕ್ತಸ್ರಾವ ಚಿಕಿತ್ಸೆಗೆ ಕನಿಷ್ಠ **ರೂ. 1,000/-**ದಿಂದ ಗರಿಷ್ಠ **ರೂ.10,000/-** ವರೆಗೆ ಮತ್ತು ಆರೋಗ್ಯ ತಪಾಸಣೆಗೆ **ರೂ. 500/-ರಿಂದ ರೂ, 1000/-**ವರೆಗೆ ಧನ ಸಹಾಯ ನೀಡಲಾಗುವುದು.

3. **ಕಾರ್ಮಿಕರ ಅಪಘಾತ ಧನ ಸಹಾಯ :** ಕಾರ್ಮಿಕರಿಗೆ ಕೆಲಸದ ವೇಳೆಯಲ್ಲಿ ಅಪಘಾತವಾದಲ್ಲಿ ಕನಿಷ್ಠ **ರೂ. 1,000/-** ಗರಿಷ್ಠ **ರೂ 3,000/-** ವರೆಗೆ ಧನ ಸಹಾಯ ನೀಡಲಾಗುವುದು. ಸೌಲಭ್ಯ ಪಡೆಯುವ ಕಾರ್ಮಿಕರು ಅಪಘಾತವಾದ ಮೂರು ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

4 **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ :**ಈ ಯೋಜನೆಯ ಸೌಲಭ್ಯ ಪಡೆಯಬೇಕಾದರೆ ಮೃತರ ಕುಟುಂಬದ ಅವಲಂಬಿತರು ಕಾರ್ಮಿಕ ಮೃತ ಪಟ್ಟ ಆರು ತಿಂಗಳೊಳಗೆ ನಿಗದಿತ ಅರ್ಜಿ ನಮೂನೆಯಲ್ಲಿ ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿದಲ್ಲಿ, **ರೂ.5,000/-** ಧನ ಸಹಾಯ ನೀಡಲಾಗುವುದು.

5. **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ :** ನೊಂದಾಯಿತ ಕಾರ್ಮಿಕ ಸಂಘಟನೆಗಳು/ಸರ್ಕಾರೇತರ ಸಂಸ್ಥೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ಹಮ್ಮಿಕೊಳ್ಳುವ ವಾರ್ಷಿಕ ಆರೋಗ್ಯ ತಪಾಸಣೆ ಶಿಬಿರಕ್ಕೆ ರೂ. **30,000/-** ಧನ ಸಹಾಯ ನೀಡಲಾಗುವುದು. ಒಂದು ಸಂಘಟನೆಗೆ ವರ್ಷದಲ್ಲಿ ಒಂದು ಬಾರಿ ಮಾತ್ರ ಈ ಸೌಲಭ್ಯ ನೀಡಲಾಗುವುದು.

6 **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ :** ನೋಂದಾಯಿತ ಕಾರ್ಮಿಕ ಸಂಘಟನೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಂಡಲ್ಲಿ **ರೂ. 50,000/-** ಧನ ಸಹಾಯ ನೀಡಲಾಗುವುದು. ವರ್ಷದಲ್ಲಿ ಒಂದು ಸಂಘಟನೆಗೆ ಒಂದು ಬಾರಿ ಮಾತ್ರ ಈ ಸೌಲಭ್ಯ ನೀಡಲಾಗುವುದು.

# ಅನುಬಂಧ-2

## ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-,** ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**

14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

ಅನುಬಂಧ–3

## ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಯೋಜನೆಗಳ ವಿವರ

| ವೆಚ್ಚಗಳು | 2015–16 | 2016–17 | 2017–18 | 2018–19 | 2019–20 |
|---|---|---|---|---|---|
| ಕಲ್ಯಾಣ ಯೋಜನೆಗಳ ವೆಚ್ಚ | 1,65,17,437 | 2,81,78,413 | 7,28,23,200 | 8,74,93,511 | 10,68,78,252 |
| ಆಡಳಿತಾತ್ಮಕ ವೆಚ್ಚ | 4,15,94,988 | 3,40,77,237 | 53494723 | 6,83,63,224 | 6,63,10,597 |
| ಮಂಡಳಿ ಆಸ್ತಿ ಅಭಿವೃದ್ಧಿಗಾಗಿ ವೆಚ್ಚ | 1,78,12,182 | 1,67,10,006 | 3,35,39,755 | 2,35,72,067 | 1,04,55,403 |
| ಒಟ್ಟು ರೂ. | 7,59,24,607 | 7,89,65,656 | 15,98,57,678 | 17,94,28,80 | 18,36,44,252 |

<u>ಅನುಬಂಧ–4</u>

## ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ

## ಮಂಡಳಿಯಲ್ಲಿ ನೋಂದಾಯಿತರಾಗಿರುವ ಕಟ್ಟಡ ಕಾರ್ಮಿಕರ ಮಕ್ಕಳಿಗಾಗಿ ಕಳೆದ 3 ವರ್ಷದಲ್ಲಿ ವಿವಿಧ ಸೌಲಭ್ಯಗಳಡಿ ಖರ್ಚು ಮಾಡಿರುವ ವಿವರಗಳು.

| ಕ್ರ. ಸಂ. | ಸೌಲಭ್ಯ | 2017–18 | 2018–19 | 2019–20 | 2020–21 |
|---|---|---|---|---|---|
| 1. | ಶೈಕ್ಷಣಿಕ ಧನಸಹಾಯ | 384717037/– | 53,32,79,365/– | 72,47,88,917/– | 40,58,51,650/– |
| 2. | ಮದುವೆ ಸಹಾಯಧನ | 47,26,00,000/– | 47,58,75,000/– | 45,35,96,000/– | 20,19,15,000/– |
| 3. | ಹೆರಿಗೆ ಸಹಾಯಧನ | 70,05,000/– | 91,60,000/– | 1,19,30,174/– | 9,35,000/– |
| 4. | ಶಿಶುಪಾಲನಾ ಸೌಲಭ್ಯ | – | – | 30,00,000/– | 20,00,000/– |
| | ಒಟ್ಟು | **86,43,22,037/–** | **101,83,14,365/–** | **119,33,15,091/–** | **61,07,01,650/–** |

# ಉಪ ನಿರ್ದೇಶಕರು(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ

**2019-20 ನೇ ಸಾಲಿನಲ್ಲಿ ನೆರೆಹಾನಿಯಿಂದ ಶಿಥಿಲಗೊಂಡಿದ್ದು ಅತೀ ತುರ್ತಾಗಿ ಮೇಜರ್ ಹಾಗೂ ಮೈನರ್ ರಿಪೇರಿಗಾಗಿ ಶಾಲೆಗಳಿಗೆ ಬಿಡುಗಡೆ ಮಾಡಲಾದ ಅನುದಾನದ ವಿವರ**

| ಅ.ನಂ | ಮತಕ್ಷೇತ್ರ | ತಾಲೂಕಿನ ಹೆಸರು | ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಮಂಜೂರಾದ ಅನುದಾನ (ರೂ ಲಕ್ಷಗಳಲ್ಲಿ) | ಕಾಮಗಾರಿ ಹಂತ |
|---|---|---|---|---|---|---|
| 1 | ತೇರದಾಳ | ಜಮಖಂಡಿ | ಹೆಚ್.ಪಿ.ಎಸ್ ತಮದಡ್ಡಿ | | | |
| 2 | ತೇರದಾಳ | ಜಮಖಂಡಿ | ಹೆಚ್.ಪಿ.ಎಸ್ ಆಸಂಗಿ | 12 | 4.8 | ಮುಕ್ತಾಯ |
| 3 | ತೇರದಾಳ | ಜಮಖಂಡಿ | ಕೆ.ಜಿ ಹೆಚ್.ಪಿ.ಎಸ್ ಹಿಪ್ಪರಗಿ | 4 | 1.6 | ಮುಕ್ತಾಯ |
| 4 | ತೇರದಾಳ | ಜಮಖಂಡಿ | ಯು.ಹೆಚ್.ಪಿ.ಎಸ್ ಕುಲಹಳ್ಳಿ | 6 | 2.4 | ಮುಕ್ತಾಯ |
| 5 | ತೇರದಾಳ | ಜಮಖಂಡಿ | ಹೆಚ್.ಪಿ.ಎಸ್ ಕುಲಹಳ್ಳಿ | 2 | 0.6 | ಮುಕ್ತಾಯ |
| 6 | ತೇರದಾಳ | ಜಮಖಂಡಿ | ಜಿ.ಹೆಚ್.ಎಸ್ ತಮದಡ್ಡಿ | 8 | 4.8 | ಮುಕ್ತಾಯ |
| 7 | ತೇರದಾಳ | ಮುಧೋಳ | ಸ ಕಿ ಪ್ರಾ ಶಾಲೆ ನಂದಗಾಂವ ವಸ್ತಿ ನಂದಗಾಂವ | 8 | 4.8 | ಮುಕ್ತಾಯ |
| 8 | ತೇರದಾಳ | ಮುಧೋಳ | ಸ ಹಿ ಪ್ರಾ ಶಾಲೆ, ಮಾರಾಪೂರ | 4 | 7.6 | ಮುಕ್ತಾಯ |
| | | | | 7 | 4.85 | ಮುಕ್ತಾಯ |
| | | | ಒಟ್ಟು | 51 | 31.45 | |
| **2019-20 ನೇ ಸಾಲಿನಲ್ಲಿ ನೆರೆಹಾನಿಯಿಂದ ಶಿಥಿಲಗೊಂಡ ಭಾಗಶಃ ಹಾಳಾದ ಶಾಲೆಗಳ ಮರು ನಿರ್ಮಾಣ ವಿವರ** | | | | | | |
| 1 | ತೇರದಾಳ | ಜಮಖಂಡಿ | ಹೆಚ್.ಪಿ.ಎಸ್ ಆಸಂಗಿ | | | |
| 2 | ತೇರದಾಳ | ಜಮಖಂಡಿ | ಯು.ಹೆಚ್.ಪಿ.ಎಸ್ ರಾಂಪೂರ | 4 | 48.00 | ಕಾಮಗಾರಿಗಳು ಪ್ರಗತಿಯಲ್ಲಿವೆ |
| 3 | ತೇರದಾಳ | ಜಮಖಂಡಿ | ಹೆಚ್.ಪಿ.ಎಸ್ ರಾಂಪೂರ | 1 | 12.00 | |
| | | | | 2 | 24.00 | |
| | | | ಒಟ್ಟು | 7 | 84.00 | |
| **2019-20 ನೇ ಸಾಲಿನಲ್ಲಿ ನೆರೆಹಾನಿಯಿಂದ ಸಂಪೂರ್ಣ ಹಾಳಾದ ಶಾಲೆಯ ವಿವರ** | | | | | | |
| 1 | ತೇರದಾಳ | ಮುಧೋಳ | ಹೆಚ್.ಪಿ.ಎಸ್ ಢವಳೇಶ್ವರ | | | |
| | | | | 8 | 0.00 | |
| | | | ಒಟ್ಟು | 8 | 0.00 | |

ನೆರೆಹಾವಳಿಯಿಂದ ಮುಧೋಳ ತಾಲೂಕಿನಲ್ಲಿ ಸಂಪೂರ್ಣ ಹಾಳಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಢವಳೇಶ್ವರ ಶಾಲೆಯನ್ನು ವಿಪ್ರೋ ಕಂಪನಿ ಬೆಂಗಳೂರವರು ದತ್ತು ಪಡೆದಿರುತ್ತಾರೆ.

ಉಪ ನಿರ್ದೇಶಕರು(ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 279
2. ಮಾನ್ಯ ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ (ದೊಡ್ಡಬಳ್ಳಾಪುರ)
3. ಉತ್ತರಿಸಬೇಕಾದ ದಿನಾಂಕ : 10/12/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಲಾಕ್‌ಡೌನ್ ಅವಧಿಯಲ್ಲಿ ವಲಸೆ ಕಾರ್ಮಿಕರಿಗೆ ರಾಜ್ಯ ಸರ್ಕಾರವು ನೀಡಿರುವ ಸೌಲಭ್ಯಗಳು ಯಾವುವು; ಇವುಗಳಿಗೆ ರಾಜ್ಯ ಸರ್ಕಾರವು ಮಾಡಿರುವ ವೆಚ್ಚವೆಷ್ಟು (ವಿವರಗಳನ್ನು ನೀಡುವುದು); | ಲಾಕ್‌ಡೌನ್ ಅವಧಿಯಲ್ಲಿ ಸಂಕಷ್ಟಕ್ಕೊಳಗಾದ ವಲಸೆ ಕಾರ್ಮಿಕರು ಸೇರಿದಂತೆ ಅಸಂಘಟಿತ ವಲಯದ ಕಾರ್ಮಿಕರಿಗೆ ಸದರಿ ಅವಧಿಯಲ್ಲಿ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:–**<br><br>➢ ಕೋವಿಡ್–19 ರಿಂದ ರಕ್ಷಣೆ ಪಡೆಯಲು ಮಾಸ್ಕ್, ಸಾಬೂನು, ಸ್ಯಾನಿಟೈಸರ್ ಇತ್ಯಾದಿಗಳನ್ನು ಒದಗಿಸಲು ಹಾಗೂ ಈ ಸಾಂಕ್ರಾಮಿಕ ರೋಗದ ಕುರಿತು ಜನರಲ್ಲಿ ಜಾಗೃತಿ ಮೂಡಿಸಲು ಮತ್ತು ಸಂವಹನ ಚಟುವಟಿಕೆಗಳಿಗಾಗಿ ಪ್ರತಿ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ತಲಾ ರೂ.5 ಲಕ್ಷಗಳಂತೆ 41 ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ಒಟ್ಟು ರೂ.2.05 ಕೋಟಿಗಳನ್ನು ಬಿಡುಗಡೆಗೊಳಿಸುವ ಮೂಲಕ ವೆಚ್ಚ ಮಾಡಲಾಗಿದೆ.<br><br>➢ ಸಂಕಷ್ಟಕ್ಕೊಳಗಾದ ಅಸಂಘಟಿತ ಕಾರ್ಮಿಕರಿಗೆ ಊಟೋಪಚಾರ, ವಸತಿ ಇತ್ಯಾದಿ ಮೂಲಸೌಕರ್ಯಗಳನ್ನು ಒದಗಿಸಲು, ವ್ಯವಸ್ಥೆ ಮಾಡಿದ ಸಮುದಾಯ ಭವನ / ಕಲ್ಯಾಣ ಮಂಟಪ / ಖಾಸಗಿ ಕಲ್ಯಾಣ ಮಂಟಪಗಳ ವೆಚ್ಚವನ್ನು ಭರಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಕಾರ್ಮಿಕರ ಅಧ್ಯಯನ ಸಂಸ್ಥೆಗೆ ರೂ.1.00 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ.<br><br>➢ ಬೆಂಗಳೂರು ಮತ್ತು ರಾಜ್ಯದಾದ್ಯಂತ ಸಂಕಷ್ಟಕ್ಕೊಳಗಾದ ಅಸಂಘಟಿತ ವಲಯಕ್ಕೆ ಸೇರಿದ ಎಲ್ಲಾ ವಲಸೆ ಕಾರ್ಮಿಕರನ್ನು (ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರನ್ನು ಹೊರತುಪಡಿಸಿ) ಗುರುತಿಸಿ, ಸಿದ್ದಪಡಿಸಿದ ಆಹಾರ ಹಾಗೂ ಪಡಿತರ ಕಿಟ್ ಅನ್ನು ವಿತರಿಸಲು ತಗಲಿರಬಹುದಾದ ಅಂದಾಜು ವೆಚ್ಚ ರೂ. 5.00 ಕೋಟಿ (ಐದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ಮರುಪಾವತಿಸಲಾಗಿದೆ.<br><br>➢ ಶೀಘ್ರವಾಗಿ ಹರಡುತ್ತಿರುವ ಕೋವಿಡ್–19ರ ಕಾರಣ, ಕರ್ನಾಟಕದಿಂದ ಇತರೆ ರಾಜ್ಯಗಳಿಗೆ ತೆರಳುತ್ತಿರುವ ಹಾಗೂ ಇತರೆ ರಾಜ್ಯಗಳಿಂದ ಕರ್ನಾಟಕಕ್ಕೆ ಬರಲಿಚ್ಛಿಸುವ ವಲಸೆ ಕಾರ್ಮಿಕರಿಗೆ ಸಹಾಯ ಮಾಡಲು, |

| | | |
|---|---|---|
| | | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಮತ್ತು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಂಟಿಯಾಗಿ 24/7 ಉಚಿತ ಸಹಾಯವಾಣಿಯನ್ನು ತೆರೆಯಲಾಗಿದ್ದು, 2 ಮಂಡಳಿಯು ಸಹಾಯವಾಣಿಗೆ ತಗಲು ವೆಚ್ಚವನ್ನು ಸಮಪ್ರಮಾಣದಲ್ಲಿ ಭರಿಸುವಂತೆ ಸರ್ಕಾರವು ಸೂಚಿಸಿರುತ್ತದೆ. ಪ್ರಸ್ತುತ ಸದರಿ ಉದ್ದೇಶಕ್ಕಾಗಿ ಒಟ್ಟು ರೂ. 77,98,964/- ಗಳನ್ನು ವೆಚ್ಚ ಮಾಡಲಾಗಿದೆ.<br><br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>1. ಮಾನ್ಯ ಮುಖ್ಯಮಂತ್ರಿಗಳ ಘೋಷಣೆಯಂತೆ 16,48,431 ಮಂಡಳಿಯ ಫಲಾನುಭವಿಗಳಿಗೆ ತಲಾ ರೂ.5,000/- ಗಳಂತೆ ಒಟ್ಟು ರೂ. 824.21 ಕೋಟಿ ಸಹಾಯ ಧನವನ್ನು ಬ್ಯಾಂಕ್ ಖಾತೆಗಳಿಗೆ ಜಮಾ ಮಾಡಲಾಗಿರುತ್ತದೆ.<br>2. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಕೋರೋನಾ ವೈರಸ್ ಬಗ್ಗೆ ಅರಿವು ಮೂಡಿಸಲು ಮತ್ತು ಮಾಸ್ಕ್ ಸ್ಯಾನಿಟೈಸರ್ ಹಾಗೂ ಸೋಪುಗಳನ್ನು ಕಾರ್ಮಿಕರಿಗೆ ವಿತರಣೆ ಮಾಡಲು 41 ಉಪ ವಿಭಾಗ ಮಟ್ಟದ ಕಾರ್ಮಿಕ ಅಧಿಕಾರಿಗಳಿಗೆ ತಲಾ ರೂ.10 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.<br>3. ಮಂಡಳಿಯ ವತಿಯಿಂದ ಬೆಂಗಳೂರಿನಲ್ಲಿ ಸ್ಥಾಪಿಸಲಾಗಿದ್ದ 10 ಶಿಶುಪಾಲನಾ ಕೇಂದ್ರಗಳಲ್ಲಿನ ಮಕ್ಕಳಿಗಾಗಿ Packed Nutrition Food & Toys ಗಳನ್ನು ಪೋಷಕರ ಮನೆಗಳಿಗೆ ತಲುಪಿಸಲಾಗಿರುತ್ತದೆ.<br>4. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಆಹಾರ ಒದಗಿಸಲು ಮತ್ತು ಅವರ ಸಮಸ್ಯೆಗಳನ್ನು ಆಲಿಸಲು 24*7 ಸಹಾಯವಾಣಿ (155214) ಯನ್ನು ಸ್ಥಾಪಿಸಲಾಗಿರುತ್ತದೆ.<br>5. ವಸತಿ ರಹಿತ ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಜಿಲ್ಲಾಡಳಿತದ ಸಹಕಾರದೊಂದಿಗೆ ವಸತಿ ಸೌಲಭ್ಯ ಮತ್ತು ಊಟವನ್ನು ಒದಗಿಸಲಾಗಿರುತ್ತದೆ.<br>6. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಲಾಕ್‌ಡೌನ್ ಪ್ರಾರಂಭದಿಂದ ಇದುವರೆಗೂ 89.87 ಲಕ್ಷ ಸಿದ್ಧಪಡಿಸಿದ ಆಹಾರದ ಪ್ಯಾಕೆಟ್ ಗಳನ್ನು ವಿತರಿಸಲಾಗಿರುತ್ತದೆ.<br>7. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ 7.15 ಲಕ್ಷ ಆಹಾರ ಸಾಮಾಗ್ರಿಗಳ ಕಿಟ್ ಗಳನ್ನು ತಯಾರಿಸಿ ವಿತರಿಸಲಾಗುತ್ತಿದೆ.<br>8. ವಲಸೆ ಕಟ್ಟಡ ಕಾರ್ಮಿಕರನ್ನು ತಮ್ಮ ತವರು ರಾಜ್ಯಗಳಿಗೆ ವಿಶೇಷ ಶ್ರಮಿಕ ರೈಲುಗಳ ಮೂಲಕ ಕಳುಹಿಸಲು ಅಗತ್ಯ ಕ್ರಮ ಕೈಗೊಂಡಿದ್ದು, ಪ್ರಯಾಣದ ಸಮಯದಲ್ಲಿ ಆಹಾರ ಮತ್ತು ಅಗತ್ಯ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ.<br><br>ಮೇಲ್ಕಂಡ ಕ್ರಮಗಳಿಗಾಗಿ ಮಂಡಳಿಯಿಂದ **ರೂ.911.18** ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಲಾಗಿರುತ್ತದೆ. |

| | | | |
|---|---|---|---|
| | | 04 | ಉಚಿತ ಸಹಾಯವಾಣಿ (24*7) | ರೂ.0.78 ಕೋಟಿ |
| | | | **ಒಟ್ಟು ವೆಚ್ಚ** | **ರೂ.08.83 ಕೋಟಿ** |

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**

ಈ ಉದ್ದೇಶಕ್ಕಾಗಿ ಮಂಡಳಿಯಿಂದ 52.70 ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಲಾಗಿದೆ. ವಿವರಗಳು ಈ ಕೆಳಕಂಡಂತಿದೆ:

| ಕ್ರ ಸಂ. | ಸೌಲಭ್ಯ | ಖರ್ಚಾದ ಮೊತ್ತ |
|---|---|---|
| 1. | ಆಹಾರ ಸಾಮಾಗ್ರಿಗಳ ಕಿಟ್ | 51,03,30,385/- |
| 2. | ಊಟದ ಪ್ಯಾಕೇಟ್ | 1,25,39,400/- |
| 3. | ಮೊಟ್ಟೆ | 7,58,835/- |
| 4. | ಬಾಳೆ ಹಣ್ಣು ಮತ್ತು ಮೂಸಂಬಿ | 28,67,660/- |
| 5. | ಮಜ್ಜಿಗೆ | 5,81,242/- |
| | ಒಟ್ಟು | **52,70,77,522/-** |

**ಕಾಇ 401 ಎಲ್ಇಟಿ 2020**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

| | | |
|---|---|---|
| ಆ) | ಸರ್ಕಾರದಿಂದ ರಾಜ್ಯ ವ್ಯಾಪ್ತಿ ಎಷ್ಟು ವಲಸೆ ಕಾರ್ಮಿಕರಿಗೆ ಆಹಾರ ಕಿಟ್‌ಗಳು, ಹಾಲು, ಹಣ್ಣು ಮುಂತಾದವುಗಳನ್ನು ವಿತರಿಸಲಾಗಿದೆ (ತಾಲ್ಲೂಕುವಾರು ವಿವರಗಳನ್ನು ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ಕಟ್ಟಡ ಕಾರ್ಮಿಕರು, ವಲಸೆ ಕಾರ್ಮಿಕರು ಮತ್ತು ಅಸಂಘಟಿತ ಕಾರ್ಮಿಕರಿಗಾಗಿ 7.15 ಲಕ್ಷ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ತಯಾರಿಸಿ ವಿತರಿಸಲಾಗಿರುತ್ತದೆ. ಈ ಕಿಟ್ ವಿತರಣೆಯ ಪ್ರದೇಶವಾರು ವಿವರವನ್ನು ಅನುಬಂಧದಲ್ಲಿ ನೀಡಿದೆ.<br><br>ವಲಸೆ ಕಟ್ಟಡ ಕಾರ್ಮಿಕರನ್ನು ತಮ್ಮ ತವರು ರಾಜ್ಯಗಳಿಗೆ ಬೆಂಗಳೂರಿನಿಂದ ವಿಶೇಷ ಶ್ರಮಿಕ ರೈಲುಗಳ ಮೂಲಕ ಕಳುಹಿಸುವ ಸಂದರ್ಭದಲ್ಲಿನ ಪ್ರಯಾಣದ ಸಮಯದಲ್ಲಿ 1,88,715 ಪ್ಯಾಕೇಟ್ಸ್ ಊಟ, 80,300 ಮೊಟ್ಟೆ, 29,959 ಕೆಜಿ ಬಾಳೆ ಹಣ್ಣು, 50,820 ಕೆಜಿ ಮೂಸಂಬಿ ಮತ್ತು 75,400 ಮಜ್ಜಿಗೆ ಪ್ಯಾಕೇಟ್‌ಗಳನ್ನು ವಿತರಿಸಲಾಗಿರುತ್ತದೆ. |
| ಇ) | ಈ ಉದ್ದೇಶಕ್ಕಾಗಿ ಸರ್ಕಾರ ಖರ್ಚು ಮಾಡಿರುವ ವೆಚ್ಚವೆಷ್ಟು (ವಿವರಗಳನ್ನು ನೀಡುವುದು) | **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br><br>ಈ ಉದ್ದೇಶಕ್ಕಾಗಿ ಮಂಡಳಿಯ ವತಿಯಿಂದ ಮಾಡಿರುವ ವೆಚ್ಚದ ವಿವರ ಈ ಕೆಳಗಿನಂತಿದೆ:- |

| ಕ್ರ.ಸಂ. | ಉದ್ದೇಶ | ಮೊತ್ತ (ಕೋಟಿಗಳಲ್ಲಿ) |
|---|---|---|
| 01 | ಸಾಂಕ್ರಾಮಿಕ ರೋಗದ ಕುರಿತು ಜನರಲ್ಲಿ ಜಾಗೃತಿ ಮೂಡಿಸಲು ಮತ್ತು ಸಂವಹನ ಚಟುವಟಿಕೆಗಳಿಗೆ ಹಾಗೂ ಮಾಸ್ಕ್, ಸಾಬೂನು, ಸ್ಯಾನಿಟೈಸರ್ ಇತ್ಯಾದಿಗಳನ್ನು ಒದಗಿಸಲು. | ರೂ.2.05 ಕೋಟಿ |
| 02 | ಅಸಂಘಟಿತ ಕಾರ್ಮಿಕರಿಗೆ ಊಟೋಪಚಾರ, ವಸತಿ ಇತ್ಯಾದಿ ಮೂಲಸೌಕರ್ಯಗಳನ್ನು ಒದಗಿಸಲು, ವ್ಯವಸ್ಥೆ ಮಾಡಿದ ಸಮುದಾಯ ಭವನ / ಕಲ್ಯಾಣ ಮಂಟಪ / ಖಾಸಗಿ ಕಲ್ಯಾಣ ಮಂಟಪಗಳ ವೆಚ್ಚಕ್ಕಾಗಿ. | ರೂ.1.00 ಕೋಟಿ |
| 03 | ಅಸಂಘಟಿತ ವಲಯಕ್ಕೆ ಸೇರಿದ ಎಲ್ಲಾ ವಲಸೆ ಕಾರ್ಮಿಕರನ್ನು (ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರನ್ನು ಹೊರತುಪಡಿಸಿ) ಗುರುತಿಸಿ, ಸಿದ್ದಪಡಿಸಿದ ಆಹಾರ ಹಾಗೂ ಪಡಿತರ ಕಿಟ್ ಅನ್ನು ವಿತರಿಸಿರುವುದಕ್ಕಾಗಿ. | ರೂ.5.00 ಕೋಟಿ |

# ಅನುಬಂಧ

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಪೂರೈಸಲಾದ ಫುಡ್ ಕಿಟ್‌ಗಳ ಜಿಲ್ಲಾವಾರು ವಿವರ

| ಕ್ರಸಂ | ಜಿಲ್ಲೆಯ ಹೆಸರು | ಹಂಚಿಕೆ ಮಾಡಲಾಗಿರುವ ಫುಡ್ ಕಿಟ್‌ಗಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 3,18,705 |
| 2 | ಬಿ.ಬಿ.ಎಂ.ಪಿ | 98,012 |
| 3 | ಬೆಂಗಳೂರು ಗ್ರಾಮಾಂತರ | 14,935 |
| 4 | ರಾಮನಗರ | 9,000 |
| 5 | ಚಿಕ್ಕಬಳ್ಳಾಪುರ | 7,000 |
| 6 | ಕೋಲಾರ | 3,025 |
| 7 | ತುಮಕೂರು | 23,375 |
| 8 | ಮಂಡ್ಯ | 8,798 |
| 9 | ಹಾಸನ | 27,000 |
| 10 | ಉಡುಪಿ | 5,000 |
| 11 | ಕಲಬುರಗಿ | 17,000 |
| 12 | ಚಿತ್ರದುರ್ಗ | 9,000 |
| 13 | ಕೊಪ್ಪಳ | 12,000 |
| 14 | ಹಾವೇರಿ | 30,500 |
| 15 | ಉತ್ತರ ಕನ್ನಡ | 24,000 |
| 16 | ಹುಬ್ಬಳ್ಳಿ – ಧಾರವಾಡ | 27,500 |
| 17 | ದಾವಣಗೆರೆ | 6,250 |
| 18 | ಬೆಳಗಾವಿ | 53,000 |
| 19 | ಚಾಮರಾಜನಗರ | 5,000 |
| 20 | ಬೀದರ್ | 4,000 |
| 21 | ಯಾದಗೀರಿ | 3,000 |
| 22 | ರಾಯಚೂರು | 3,000 |
| 23 | ಗದಗ | 12,000 |
| | ಒಟ್ಟು | **7,21,100** |

| | |
|---|---|
| ಮಂಡಳಿಯಿಂದ ಪೂರೈಸಲಾದ ಫುಡ್ ಕಿಟ್‌ಗಳ ಒಟ್ಟು ಸಂಖ್ಯೆ | : 7,15,000 |
| ಅಕ್ಷಯ ಪಾತ್ರ ಫೌಂಡೇಶನ್ ರವರಿಂದ ಪ್ರಾಯೋಜಿಸಿದ ಉಚಿತ ಫುಡ್‌ಕಿಟ್‌ಗಳ ಸಂಖ್ಯೆ | : 20,000 |
| ಒಟ್ಟು ಕಿಟ್‌ಗಳ ಸಂಖ್ಯೆ | : 7,35,000 |
| ಹಂಚಿಕೆ ಮಾಡಲಾದ ಒಟ್ಟು ಫುಡ್ ಕಿಟ್‌ಗಳ ಸಂಖ್ಯೆ | : 7,21,100 |
| ಹಂಚಿಕೆಗೆ ಬಾಕಿ ಉಳಿದಿರುವ ಕಿಟ್‌ಗಳ ಸಂಖ್ಯೆ | : 13,900 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 890
ಮಾನ್ಯ ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸಬೇಕಾದ ದಿನಾಂಕ : 10-12-2020
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕು ಆಸ್ಪತ್ರೆಯಲ್ಲಿ ಕರ್ತವ್ಯ ನಿರ್ವಹಿಸುವ ವೈದ್ಯಾಧಿಕಾರಿಗಳ ಹಾಗೂ ಗ್ರೂಪ್-ಡಿ ಸಿಬ್ಬಂದಿಗಳಿಗೆ ಸರಿಯಾದ ವಸತಿಗೃಹ ಹಾಗೂ ಬೈಲಹೊಂಗಲ ಮತಕ್ಷೇತ್ರದ ಇಂಚಲ ಗ್ರಾಮದಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಕಾಂಪೌಂಡ್ ಗೋಡೆ ಹಾಗೂ ಸಿಬ್ಬಂದಿ ವಸತಿ ಗೃಹ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಸಾರ್ವಜನಿಕ ಆಸ್ಪತ್ರೆ ಬೈಲಹೊಂಗಲದಲ್ಲಿ 08 ವಸತಿ ಗೃಹಗಳಿದ್ದು, ಅದರಲ್ಲಿ ವೈದ್ಯಾಧಿಕಾರಿಗಳ ವಸತಿ ಗೃಹ 04. ಈ 04 ವಸತಿಗೃಹಗಳಲ್ಲಿ 02 ಶಿಥಿಲಾವಸ್ಥೆಯಲ್ಲಿರುತ್ತವೆ. ವೈದ್ಯಾಧಿಕಾರಿಗಳಿಗೆ 12 ವಸತಿಗೃಹಗಳ ಅವಶ್ಯಕತೆಯಿರುತ್ತದೆ ಮತ್ತು ಗ್ರೂಫ್-ಡಿ ಸಿಬ್ಬಂದಿಗಳ ವಸತಿಗೃಹಗಳು 04 ಇದ್ದು ಸುಸ್ಥಿತಿಯಲ್ಲಿರುತ್ತದೆ. ಒಟ್ಟು 36 ಗ್ರೂಫ್-ಡಿ ಹುದ್ದೆಗಳಿದ್ದು ಹೆಚ್ಚುವರಿ ವಸತಿ ಗೃಹಗಳ ಅವಶ್ಯಕತೆ ಇರುತ್ತದೆ. ಆಸ್ಪತ್ರೆಗೆ ಆವರಣ ಗೋಡೆಯಿದ್ದು, ಭಾಗಶ: ದುರಸ್ಥಿಯಲ್ಲಿರುತ್ತದೆ.<br><br>ಪ್ರಾಥಮಿಕ ಆರೋಗ್ಯ ಕೇಂದ್ರ ಇಂಚಲಕ್ಕೆ ಕಾಂಪೌಂಡ್ ಗೋಡೆಯಿದ್ದು, ಸದರಿ ಕೇಂದ್ರದಲ್ಲಿ ಅಧಿಕಾರಿ/ಸಿಬ್ಬಂದಿಗಳಿಗೆ ವಸತಿ ಗೃಹಗಳು ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರವು ಕೂಡಲೇ ಕ್ರಮ ಕೈಗೊಳ್ಳುವುದೇ? | ಅನುದಾನದ ಲಭ್ಯತೆಗನುಗುಣವಾಗಿ ಮುಂದಿನ ದಿನಗಳಲ್ಲಿ ಕಾಮಗಾರಿ ಕೈಗೊಳ್ಳಲು ಕ್ರಮವಹಿಸಲಾಗುವುದು. |

ಆಕುಕ 156 ಎಸ್.ಎಂ.ಎಂ. 2020

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 771
ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಗ್ರಾಮೀಣ ಭಾಗಗಳ ಪ್ರಮುಖ ಸಾರ್ವಜನಿಕ ಸಂಪರ್ಕ ರಸ್ತೆಗಳನ್ನು ಅಭಿವೃದ್ಧಿ ಪಡಿಸುವಾಗ ಹಲವೆಡೆ ಅರಣ್ಯ ಇಲಾಖೆಯ ಆಕ್ಷೇಪಣೆಗಳು ಇದ್ದು, ಇದನ್ನು ಪರಿಹರಿಸಿ ಸಾರ್ವಜನಿಕ ರಸ್ತೆಗಳ ಅಭಿವೃದ್ಧಿಗೆ ಅನುಮತಿ ನೀಡುವಲ್ಲಿನ ಸರ್ಕಾರದ ಮಾನದಂಡಗಳೇನು; | ರಾಜ್ಯದ ಕಾಯ್ದಿಟ್ಟ ಅರಣ್ಯ ಪ್ರದೇಶದ ಪಕ್ಕದಲ್ಲಿ ಮತ್ತು ಅರಣ್ಯ ಎನ್‌ಕ್ಲೋಸರ್ (Forest enclosure) ರೂಪದಲ್ಲಿ ಇರುವ ಹಾಗೂ ವನ್ಯಜೀವಿ ಅರಣ್ಯ ಪ್ರದೇಶಗಳ ವ್ಯಾಪ್ತಿಯಲ್ಲಿರುವ ಜನ ವಸತಿ ಪ್ರದೇಶಗಳಿಗೆ ಹಾದು ಹೋಗುವ ದಾರಿಗಳನ್ನು ಆಯಾ ಅರಣ್ಯ ಪ್ರದೇಶದ ಅಧಿಸೂಚನೆಗಳಲ್ಲಿಯೇ ಸಾಮಾನ್ಯವಾಗಿ ನಿರ್ದಿಷ್ಟ ಅಗಲದ ಕಾಲು ದಾರಿ (Right of way) ಅಥವಾ ಬಂಡಿ ದಾರಿ (Cart track) ರೂಪದಲ್ಲಿ ಅವಕಾಶ ನೀಡಲಾಗಿರುತ್ತದೆ. ಅಂತಹ ದಾರಿಗಳನ್ನು ಸಂಬಂಧಿಸಿದವರು ಸಾಮಾನ್ಯ ಬಳಕೆಗಾಗಿ ಉಪಯೋಗಿಸಬಹುದಾಗಿರುತ್ತದೆ.<br><br>ಮೇಲಿನ ಅವಕಾಶವನ್ನು ಹೊರತುಪಡಿಸಿ ಅರಣ್ಯ ಪ್ರದೇಶದಲ್ಲಿ ಈ ದಾರಿಗಳ ಅಗಲವನ್ನು ವಿಸ್ತರಿಸಲು ಅಥವಾ ಬೇರೆ ಯಾವುದೇ ಬದಲಿ ಅರಣ್ಯೇತರ ಪ್ರದೇಶಗಳಲ್ಲಿ ದಾರಿಯು ಲಭ್ಯವಿಲ್ಲದಿದ್ದಲ್ಲಿ ಅರಣ್ಯ ಪ್ರದೇಶದಲ್ಲಿ ಹೊಸ ರಸ್ತೆಗಳನ್ನು ನಿರ್ಮಿಸಲು 1980ರ ಅರಣ್ಯ (ಸಂರಕ್ಷಣೆ) ಕಾಯ್ದೆಯಡಿಯಲ್ಲಿ ಕೇಂದ್ರ ಸರ್ಕಾರದ ಪೂರ್ವಾನುಮತಿ ಪಡೆಯುವುದು ಅವಶ್ಯವಿರುತ್ತದೆ.<br><br>ಮೇಲಿನಂತೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದ ಪ್ರಕರಣಗಳಲ್ಲಿ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಅರಣ್ಯ ಇಲಾಖೆಯವರು ಅಡ್ಡಿಪಡಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ) | ಗ್ರಾಮಗಳನ್ನು ಸಂಪರ್ಕಿಸುವ ಪ್ರಮುಖ ಸಾರ್ವಜನಿಕ ಸಂಪರ್ಕ ರಸ್ತೆಗಳಲ್ಲಿ ಅರಣ್ಯ ಇಲಾಖೆಯ ಆಕ್ಷೇಪಣೆ ಇರುವ ರಸ್ತೆಗಳು ಎಷ್ಟು; (ಉಡುಪಿ ಜಿಲ್ಲೆಯ ವಿವರಗಳನ್ನು ಒದಗಿಸುವುದು) | ಕುಂದಾಪುರ ಅರಣ್ಯ ವಿಭಾಗ ವ್ಯಾಪ್ತಿಯ ಉಡುಪಿ ಜಿಲ್ಲೆಯಲ್ಲಿ ಗ್ರಾಮಗಳನ್ನು ಸಂಪರ್ಕಿಸುವ (ಅರಣ್ಯ ಪ್ರದೇಶದಲ್ಲಿ ಹಾದು ಹೋಗುವ) ರಸ್ತೆಗಳನ್ನು ನಿರ್ಮಾಣ ಮಾಡಲು ಅಥವಾ ದುರಸ್ತಿ ಮಾಡಲು ಅರಣ್ಯ ಸಂರಕ್ಷಣಾ ಕಾಯ್ದೆ 1980ರಡಿ ಅನುಮೋದನೆಯನ್ನು ಕೋರಿ ಇದುವರೆಗೆ ಒಟ್ಟು ಮೂರು (3) ಪ್ರಸ್ತಾವನೆಗಳು ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಗಳ ಪ್ರಸ್ತುತ ಹಂತದ ವಿವರಗಳನ್ನು ತಯಾರಿಸಿ ಅನುಬಂಧದಲ್ಲಿ ಲಗತ್ತಿಸಿ ಸಲ್ಲಿಸಿದೆ. |
| ಇ) | ಅರಣ್ಯ ಇಲಾಖೆಗೆ ಸಂಬಂಧಿಸಿದ ಜಾಗ ಇದ್ದರೂ, ಸಾರ್ವಜನಿಕ ಹಿತದೃಷ್ಟಿಯಿಂದ ಅನುಕೂಲ ಕಲ್ಪಿಸುವಲ್ಲಿ ಸರ್ಕಾರವು ಕೈಗೊಂಡ ಕ್ರಮಗಳೇನು? (ಸಂಪೂರ್ಣ ವಿವರಗಳನ್ನು ಒದಗಿಸುವುದು) | |

ಸಂಖ್ಯೆ: ಅಪಜೀ 85 ಎಫ್‌ಎಲ್‌ಎಲ್ 2020

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

# ಅನುಬಂಧ

ಕುಂದಾಪುರ ವಿಭಾಗ, ಉಡುಪಿ ಜಿಲ್ಲೆಯಲ್ಲಿ ಗ್ರಾಮೀಣ ರಸ್ತೆಗಳ ಅಭಿವೃದ್ಧಿ / ದುರಸ್ತಿ ಮಾಡಲು ಸ್ವೀಕೃತವಾದ ಪ್ರಸ್ತಾವನೆಗಳ ವಿವರ.

| ಕ್ರ ಸಂ. | ಪ್ರಸ್ತಾವನೆ ಸಂಖ್ಯೆ ಮತ್ತು ವಿವರ | ಪ್ರಸ್ತುತ ಹಂತ |
|---|---|---|
| 1 | FP/KA/ROAD/34603/2018<br>ಈದು ಪಲ್ಕೆ ಯಿಂದ ಬೆಟ್ಟಾಣಿ ಕೇರಾ ವರೆಗಿನ ನಾರಾವಿ ಮೀಸಲು ಅರಣ್ಯ ಪ್ರದೇಶದಲ್ಲಿ ಹಾದು ಹೋಗುವ ಕಚ್ಚಾ ರಸ್ತೆಯನ್ನು ಡಾಂಬರೀಕರಣ ಮಾಡಲು 0.65 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಉಪಯೋಗಿಸಲು ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಉಡುಪಿ (ಉಪಯೋಗಿ ಸಂಸ್ಥೆ) ಇವರ ಪ್ರಸ್ತಾವನೆ | ಉಪಯೋಗಿ ಸಂಸ್ಥೆಯವರು ದಿನಾಂಕ 07–07–2018ರಂದು ಸಲ್ಲಿಸಿದ್ದ ಪ್ರಸ್ತಾವನೆಯು ಅಪೂರ್ಣವಾಗಿದ್ದುದರಿಂದ ದಿನಾಂಕ 24–08–2018ರಂದು ಹಿಂದಿರುಗಿಸಲಾಗಿತ್ತು. ಅಲ್ಲದೇ ದಿನಾಂಕ 19–03–2019ರಂದು ಮರು ಸಲ್ಲಿಸಿದ ಪ್ರಸ್ತಾವನೆಯು ಸಹ ಅಪೂರ್ಣವಾಗಿದ್ದುದರಿಂದ ದಿನಾಂಕ 07–06–2019ರಂದು ಹಿಂದಿರುಗಿಸಲಾಗಿರುತ್ತದೆ. ಆದರೆ, Forest Rights Act, 2006ರಡಿಯಲ್ಲಿ ಜಿಲ್ಲಾ ಮಟ್ಟದ ಸಮಿತಿಯು ಅನುಮೋದನೆ ನೀಡಿರುವುದರಿಂದ ಉಪಯೋಗಿ ಸಂಸ್ಥೆಯು ಪ್ರಸ್ತಾವನೆಯನ್ನು ಹಿಂಪಡೆಯಲು ದಿನಾಂಕ 25–03–2019ರಂದು ಕೋರಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಸದರಿ ವಿಷಯದ ಬಗ್ಗೆ ದಿನಾಂಕ 27–11–2019ರಂದು ಸರ್ಕಾರಕ್ಕೆ ಪತ್ರ ಬರೆದು ಸೂಕ್ತ ನಿರ್ದೇಶನವನ್ನು ಕೋರುತ್ತಾರೆ.<br>ಈ ಹಿನ್ನೆಲೆಯಲ್ಲಿ ದಿನಾಂಕ: 18–04–2020ರಂದು ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ ಇವರಿಗೆ ಪತ್ರ ಬರೆದು, ಯಾವ ಕಾಯ್ದೆ/ ನಿಯಮಗಳನ್ವಯ ಕ್ರಮವಹಿಸಲಾಗಿದೆ ಎಂಬ ಬಗ್ಗೆ ಸ್ಪಷ್ಟೀಕರಣ ಕೋರಲಾಗಿದೆ. |
| 2 | FP/KA/ROAD/36042/2018<br>ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ರಟ್ಟಡಿ ಗ್ರಾಮದ ಸರ್ವೆ ನಂ 124 ಹಾಗೂ ಕುಲಂಜೆ ಗ್ರಾಮದ ಸರ್ವೆ ನಂ 114ರಲ್ಲಿ 1.225 ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಹಾಲಾಡಿಯಿಂದ ಅಮಾಸೆಬೈಲು, | ಕೇಂದ್ರ ಸರ್ಕಾರದ ಪರಿಸರ ಮತ್ತುಅರಣ್ಯ ಮಂತ್ರಾಲಯವು ಪತ್ರ ಸಂಖ್ಯೆ F.No.11-48/2002-FC ದಿನಾಂಕ 14–09–2004 ಮತ್ತು 30–04–2005ರ ಮೂಲಕ ಹೊರಡಿಸಿದ ಮಾರ್ಗಸೂಚಿಗಳ ಅನ್ವಯ ಅರಣ್ಯ ಸಂರಕ್ಷಣಾ ಕಾಯ್ದೆ 1980 ಜಾರಿಗೆ ಬರುವ ಪೂರ್ವದಲ್ಲಿ (25–10–1980) ಅರಣ್ಯ ಪ್ರದೇಶದಲ್ಲಿರುವ ರಸ್ತೆಗಳನ್ನು ದುರಸ್ತಿ ಮಾಡಲು ಮತ್ತು ಡಾಂಬರೀಕರಣ ಮಾಡಲು ರಾಜ್ಯದ ಅರಣ್ಯ ಇಲಾಖೆ ಅಧಿಕಾರಿಗಳ (ಆಯಾ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ) ಅನುಮೋದನೆ ಪಡೆದು ನಿರ್ವಹಿಸಲು ಅವಕಾಶವಿರುತ್ತದೆ. ಆದುದರಿಂದ, |

| | | |
|---|---|---|
| | ಬುಕುಡಿಹೊಲ ಸಂರಕ್ಷಿತ ಅರಣ್ಯ ಪ್ರದೇಶ, ಶಂಕರನಾರಾಯಣ ವಲಯದವರೆಗೆ ರಸ್ತೆಯನ್ನು ಅಗಲೀಕರಣ ಮಾಡುವ ಸಲುವಾಗಿ ಕಾರ್ಯಪಾಲಕ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಡುಪಿ ವಿಭಾಗ ಇವರ ಪ್ರಸ್ತಾವನೆ | ಹಾಲಿ ಇರುವ ರಸ್ತೆಯನ್ನು ಮರುಡಾಂಬರೀಕರಣ ಮಾಡಲು ಅನುಮತಿಸಲಾಗಿರುತ್ತದೆ. |
| 3 | FP/KA/ROAD/15173/2015<br>ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಹೆಂಗವಳ್ಳಿ ಇರಗಿ ಯಿಂದ ರಾಜ್ಯ ಹೆದ್ದಾರಿಗೆ ತಲುಪುವ ರಸ್ತೆಯ ಸುಧಾರಣೆಯ ಕಾಮಗಾರಿಗಾಗಿ 1.38 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಉಪಯೋಗಿಸಲು ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜನಿಯರಿಂಗ್ ವಿಭಾಗ, ಉಡುಪಿ (ಉಪಯೋಗಿ ಸಂಸ್ಥೆ) ಇವರ ಪ್ರಸ್ತಾವನೆ | ಪ್ರಸ್ತಾವನೆಗೆ ಕೇಂದ್ರ ಸರ್ಕಾರವು ದಿನಾಂಕ 01-08-2016ರಂದು ತಾತ್ವಿಕ (Stage-I) ಅನುಮೋದನೆ ನೀಡಿರುತ್ತದೆ. ಸದರಿ ಅನುಮೋದನೆಯಲ್ಲಿ ವಿಧಿಸಿದ ಷರತ್ತುಗಳಿಗೆ ಅನುಪಾಲನಾ ವರದಿಯನ್ನು ರಾಜ್ಯ ಸರ್ಕಾರದ ಮುಖಾಂತರ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದ್ದು, ಕೇಂದ್ರ ಸರ್ಕಾರವು ಪರಿಹಾರಾತ್ಮಕ ನೆಡುತೋಪು ಬೆಳೆಸುವ ಪ್ರದೇಶದ ಬದಲಾವಣೆಯ ಕುರಿತು ಹೆಚ್ಚುವರಿ ಮಾಹಿತಿಯನ್ನು ಕೋರಿರುತ್ತಾರೆ.<br>ಪರಿಹಾರಾತ್ಮಕ ನೆಡುತೋಪು ಬೆಳೆಸಲು ಇಲಾಖೆಗೆ ಮಂಜೂರು ಮಾಡಿದ ಯಡಾಡಿ-ಮತ್ಯಾಡಿ ಗ್ರಾಮದ ಸ.ನಂ.210ರಲ್ಲಿ 3.50 ಎಕರೆ ಹಾಗೂ ಸ.ನಂ.221ರಲ್ಲಿ 2.18 ಎಕರೆ ಒಟ್ಟು 5.68 ಎಕರೆ ಅರಣ್ಯೇತರ ಪ್ರದೇಶವು ಕಕ್ಕುಂಜೆ-ಹೋರಿಗೊಡ್ಲು ಬ್ಲಾಕ್ ಮೀಸಲು ಅರಣ್ಯದಿಂದ 1630 ಮೀಟರ್ ದೂರದಲ್ಲಿರುತ್ತದೆ. ಆದ ಕಾರಣ ಕೇಂದ್ರ ಸರ್ಕಾರದ ದಿನಾಂಕ: 08.11.2017ರ ಅರಣ್ಯ ಸಂರಕ್ಷಣೆ ಮಾರ್ಗಸೂಚಿಗಳನ್ವಯ ಮತ್ತು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಬೆಂಗಳೂರು ಇವರ ದಿನಾಂಕ: 14.07.2020ರ ಸುತ್ತೋಲೆಯಂತೆ ಪರಿಹಾರಾತ್ಮಕ ನೆಡುತೋಪು ಬೆಳೆಸಲು ಯೋಗ್ಯವಾದ 5.68 ಎಕರೆ ಬದಲಿ ಅರಣ್ಯೇತರ ಜಮೀನನ್ನು ಒದಗಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕುಂದಾಪುರ ವಿಭಾಗ ಇವರು ದಿನಾಂಕ: 23.11.2020ರ ಪತ್ರದಲ್ಲಿ ಉಪಯೋಗಿ ಸಂಸ್ಥೆಗೆ ತಿಳಿಸಿರುತ್ತಾರೆ. |

## ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ :391

ಮಾನ್ಯ ಸದಸ್ಯರ ಹೆಸರು :ಶ್ರೀ ಭೀಮಾ ನಾಯ್ಕ ಎಸ್.(ಹಗರಿಬೊಮ್ಮನಹಳ್ಳಿ)

ಉತ್ತರಿಸಬೇಕಾದ ದಿನಾಂಕ :10.12.2020

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಕೊಟ್ಟೂರು ಪಟ್ಟಣ ತಾಲ್ಲೂಕು ಕೇಂದ್ರವಾಗಿ ಕಾರ್ಯಾರಂಭ ಮಾಡಿದ್ದು, ಪಟ್ಟಣದಲ್ಲಿ ಹಾಲಿ ಇರುವ ಸರ್ಕಾರಿ ಆಸ್ಪತ್ರೆಯನ್ನು 100 ಹಾಸಿಗೆಯ ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಸರ್ಕಾರದ ಆದೇಶ ಸಂಖ್ಯೆ:ಕಂಇ 35 ಭೂದಾಪು 2017, ದಿನಾಂಕ:06.09.2017 ರಲ್ಲಿ ಬಳ್ಳಾರಿ ಜಿಲ್ಲೆಯ ಕೊಟ್ಟೂರು ಅನ್ನು ನೂತನ ತಾಲ್ಲೂಕಾಗಿ ರಚನೆ ಮಾಡಿ ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.<br>ಸದರಿ ತಾಲ್ಲೂಕಿನಲ್ಲಿರುವ ಸಮುದಾಯ ಆರೋಗ್ಯ ಕೇಂದ್ರವನ್ನು ತಾಲ್ಲೂಕು ಸಾರ್ವಜನಿಕ ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ |
| ಆ | ಇದ್ದಲ್ಲಿ ಯಾವಾಗ ಮೇಲ್ದರ್ಜೇಗೇರಿಸಿ ಅಗತ್ಯ ಸೌಲಭ್ಯಗಳನ್ನು ಒದಗಿಸಲಾಗುವುದು? | |

ಆಕುಕ 161ಎಸ್ಎಂಎಂ 2020

(ಡಾ||ಕೆ.ಸುಧಾಕರ್)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ

ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 770
ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಅಕ್ರಮ-ಸಕ್ರಮ ಕಾನೂನಿನಡಿಯಲ್ಲಿ ಜಾಗ ಮಂಜೂರಾತಿಗೆ ಅರಣ್ಯ ಇಲಾಖೆಯ ಅಕ್ಷೇಪಣೆ ಇರುವ ಪ್ರಕರಣಗಳ ಮಂಜೂರಾತಿಗೆ ಇಲಾಖೆ ಹಾಕಿಕೊಂಡ ಮಾನದಂಡಗಳೇನು; | ಅಕ್ರಮ-ಸಕ್ರಮದಡಿ ಕೋರುವ ಜಮೀನಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಮಾನದಂಡಗಳನ್ನು ಅಳವಡಿಸಿಕೊಳ್ಳಲಾಗಿರುತ್ತದೆ:-<br>1)ಸದರಿ ಪ್ರದೇಶವು ಅರಣ್ಯ ಸ್ವರೂಪ ಹೊಂದಿರಬಾರದು.<br>2)ಸದರಿ ಪ್ರದೇಶವು ಕೇಂದ್ರ ಪರಿಣಿತ ಸಮಿತಿಗೆ ಸಲ್ಲಿಸಿದ ಡೀಮ್ಡ್ ಫಾರೆಸ್ಟ್ ಪಟ್ಟಿಯಲ್ಲಿ ಸೇರ್ಪಡೆಗೊಂಡಿರಬಾರದು.<br>3)ಮಾನ್ಯ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ.202/1995 ಮಾನದಂಡನೆಗಳ ಪ್ರಕಾರ ಡೀಮ್ಡ್ ಫಾರೆಸ್ಟ್ ಆಗಿರಬಾರದು.<br>4)ಸದರಿ ಪ್ರದೇಶವು ಅಧಿಸೂಚಿತ ಅರಣ್ಯ ಪ್ರದೇಶದ ಒಳಗೆ ಇದ್ದಲ್ಲಿ 1980ನೇ ಅರಣ್ಯ ಸಂರಕ್ಷಣಾ ಕಾಯಿದೆಯನ್ವಯ ಭೂ ಮಂಜೂರಾತಿಗೆ ಅವಕಾಶ ಇರುವುದಿಲ್ಲ. |
| ಆ) | ಮಂಜೂರಾತಿಗೆ ಸಂಬಂಧಿಸಿದಂತೆ ಬಂದ ಅರ್ಜಿಗಳನ್ನು ತಿರಸ್ಕೃತಗೊಳಿಸಿ ಫಲಾನುಭವಿಗಳಿಗೆ ಹಿಂಬರಹ ನೀಡದ ಪ್ರಕರಣಗಳಿವೆಯೇ; (ತಾಲ್ಲೂಕುವಾರು ಸಂಪೂರ್ಣ ವಿವರಗಳನ್ನು ಒದಗಿಸುವುದು) | ಮಂಜೂರಾತಿ ಸಲುವಾಗಿ ನೇರವಾಗಿ ಅರಣ್ಯ ಇಲಾಖೆಯಲ್ಲಿ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಆದರೆ ಕಂದಾಯ ಇಲಾಖೆಯಿಂದ ಮಂಜೂರಾತಿಗಾಗಿ ಅರಣ್ಯ ಇಲಾಖೆಯ ಅಭಿಪ್ರಾಯ ತಿಳಿಸಲು ಬಂದಿರುವ ಅರ್ಜಿಗಳಿಗೆ ಅರಣ್ಯ ಇಲಾಖೆಯಿಂದ ಸ್ಪಷ್ಟ ಅಭಿಪ್ರಾಯ ನೀಡಿ ಕಂದಾಯ ಇಲಾಖೆಗೆ ಹಿಂದಿರುಗಿಸಲಾಗಿರುತ್ತದೆ. |
| ಇ) | ಅರ್ಜಿ ತಿರಸ್ಕೃತಗೊಂಡವರಿಗಾಗಿ ಇಲಾಖೆಯು ತೆಗೆದುಕೊಂಡಿರುವ ಪರ್ಯಾಯ ಕ್ರಮವೇನು? | ತಿರಸ್ಕೃತಗೊಂಡ ಅರ್ಜಿಗಳಿಗೆ ಸಂಬಂಧಿಸಿದಂತೆ, ಕೈಗೊಳ್ಳಬೇಕಾದ ಕ್ರಮವು ಅರಣ್ಯ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. |

ಸಂಖ್ಯೆ: ಅಪಜೀ 73 ಎಫ್‌ಜಿಎಲ್ 2020

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 791
ಸದಸ್ಯರ ಹೆಸರು : ಶ್ರೀ ಮಂಜುನಾಥ್ ಹೆಚ್.ಪಿ (ಹುಣಸೂರು)
ಉತ್ತರಿಸಬೇಕಾದ ದಿನಾಂಕ : 10.12.2020
ಉತ್ತರಿಸುವವರು : ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಅರಣ್ಯ ಕಾಯ್ದೆ–1963ರ ಸೆಕ್ಷನ್ 4ರಲ್ಲಿ ಉದ್ಘೋಷಣೆಗೊಂಡ ಸೆಕ್ಷನ್ 17ರಲ್ಲಿ ಅಂತಿಮ ಅಧಿಸೂಚನೆ ಹೊರಡಿಸಲು ಬಾಕಿ ಇರುವ ಪ್ರಕರಣಗಳೇಷ್ಟು; (ಪ್ರಕರಣವಾರು ಮಾಹಿತಿಯನ್ನು ನೀಡುವುದು) | ವಿವರವನ್ನು **ಅನುಬಂಧ–1**ರಲ್ಲಿ ಒದಗಿಸಿದೆ. |
| ಆ) | 1963ರ ಸೆಕ್ಷನ್ 4ರಲ್ಲಿ ಬಾಕಿ ಇರುವ ಅರಣ್ಯದ ವಿಸ್ತೀರ್ಣ ಎಷ್ಟು; ಎಷ್ಟು ಸಮಯದಿಂದ ಬಾಕಿ ಉಳಿದಿರುತ್ತವೆ; (ವಿವರ ನೀಡುವುದು) | ವಿವರವನ್ನು **ಅನುಬಂಧ–2**ರಲ್ಲಿ ಒದಗಿಸಿದೆ. |
| ಇ) | ಈ ರೀತಿ ಅರಣ್ಯ ಕಾಯ್ದೆ–1963ರ ಸೆಕ್ಷನ್ 4ರಲ್ಲಿ ಅಧಿಸೂಚನೆಗೊಂಡಿರುವ ಪ್ರದೇಶಗಳಲ್ಲಿ ಎಷ್ಟು ಪ್ರದೇಶಗಳು ಒತ್ತುವರಿ ಅಥವಾ ಅತಿಕ್ರಮಣಗೊಂಡಿವೆ; (ಪ್ರಕರಣವಾರು ಮಾಹಿತಿ ನೀಡುವುದು) | ಅರಣ್ಯ ಕಾಯ್ದೆ 1963 ರ ಸೆಕ್ಷನ್ 4 ರಲ್ಲಿ ಅಧಿಸೂಚನೆಗೊಂಡಿರುವ ಪ್ರದೇಶಗಳಲ್ಲಿ ಒಟ್ಟು 4901 ಪ್ರಕರಣಗಳಲ್ಲಿ 17698.11 ಹೆಕ್ಟೇರ್ ಪ್ರದೇಶಗಳು ಒತ್ತುವರಿ ಅಥವಾ ಅತಿಕ್ರಮಣಗೊಂಡಿವೆ. (ವಿವರ ಕೆಳಗಿನ ಕೋಷ್ಟಕದಲ್ಲಿ) |

| ಕ್ರ.ಸಂ | ವೃತ್ತ | ಪ್ರಕರಣ | ವಿಸ್ತೀರ್ಣ |
|---|---|---|---|
| 1) | ಬೆಂಗಳೂರು | 580 | 2964.12 |
| 2) | ಬೆಳಗಾವಿ | --- | --- |
| 3) | ಬಳ್ಳಾರಿ | 1150 | 4376.63 |
| 4) | ಚಿಕ್ಕಮಗಳೂರು | 1071 | 1740.28 |
| 5) | ಚಾಮರಾಜನಗರ | --- | --- |
| 6) | ಧಾರವಾಡ | 9 | 168.37 |
| 7) | ಹಾಸನ | 722 | 966.39 |
| 8) | ಕಲಬುರುಗಿ | 730 | 1625.92 |
| 9) | ಕೊಡಗು | 56 | 4480.23 |
| 10) | ಕೆನರಾ | --- | --- |
| 11) | ಮೈಸೂರು | 531 | 467.74 |
| 12) | ಮಂಗಳೂರು | 52 | 908.43 |
| 13) | ಶಿವಮೊಗ್ಗ | ಕಾಲಾವಕಾಶ ಕೋರಿದೆ | |
| | **ಒಟ್ಟು** | **4901** | **17698.11** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ಒತ್ತುವರಿ ಅಥವಾ ಅತಿಕ್ರಮಣವನ್ನು ತೆರವುಗೊಳಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಒತ್ತುವರಿದಾರರ ವಿರುದ್ಧ ಅರಣ್ಯ ಮೊಕದ್ದಮೆಯನ್ನು ದಾಖಲಿಸಿ, ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಭೂ ಕಬಳಿಕೆ ವಿಶೇಷ ನ್ಯಾಯಾಲಯದಲ್ಲಿ ದಾವೆ ಹೂಡುತ್ತಿದ್ದು ಹಾಗೂ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 64(ಎ) ಪ್ರಕಾರ ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ) | ಈ ರೀತಿ ಒತ್ತುವರಿಗೆ ಅವಕಾಶ ಮಾಡಿಕೊಟ್ಟಿರುವ ಅಧಿಕಾರಿಗಳ ವಿರುದ್ಧ ಸರ್ಕಾರದಿಂದ ತೆಗೆದುಕೊಂಡಿರುವ ಕ್ರಮಗಳೇನು? | ಅಂತಹ ಪ್ರಕರಣಗಳು ಯಾವುದೂ ಇರುವುದಿಲ್ಲ. |

ಸಂಖ್ಯೆ: ಅಪಜೀ 132 ಎಫ್ಎಫ್ 2020

(ಆನಂದ್ ಸಿಂಗ್)
ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು

**Annexure-1**

**Karnataka Forest Act-1963, Sec-4 Notified Areas**

| Sl.no | Circles | Division | Number of Cases | Extent (Ha.) |
|---|---|---|---|---|
| 1 | Ballari | Ballari | 46 | 34758.2 |
| | | Chitradurga | 39 | 7110.56 |
| | | Davangere | 40 | 5888.23 |
| | | Koppal | 43 | 5824.13 |
| 2 | Belgavi | Bagalkot | 13 | 1822.53 |
| | | Gokak | 5 | 104.34 |
| | | Belgavi | 5 | 209.31 |
| | | Vijaypura | 1 | 18.63 |
| 3 | Bangalore | Bangalore Urban | 3 | 278.86 |
| | | Bangalore Rural | 7 | 945.42 |
| | | Ramnagar | 29 | 3341.53 |
| | | Kolar | 18 | 1055.29 |
| | | Chikkaballapur | 73 | 8194.07 |
| | | Bannerghatta National Park | 0 | 0 |
| 4 | Chamarajnagar | Bandipura Tiger reserve | 0 | 0 |
| | | BRT | 10 | 2305 |
| | | M.M Hills | 4 | 4097.5 |
| | | Cauvery WL | 0 | 0 |
| 5 | Chikkamagalur | Koppa | 169 | 31388.28 |
| | | Chikkamagalur | 56 | 17308.87 |
| | | Bhadra Tiger Reserve | 0 | 0 |
| 6 | Dharwad | Dharwad | 8 | 78.251 |
| | | Haveri | 4 | 187.29 |
| | | Gadag | 2 | 140.99 |
| 7 | Hassan | Hassan | 36 | 8060.24 |
| | | Tumakur | 37 | 12466.14 |
| 8 | Kalburgi | Kalburgi | 25 | 7826.24 |
| | | Raichur | 0 | 0 |
| | | Bidar | 59 | 1787.76 |
| | | Yadgir | 16 | 15562.91 |
| 9 | Kodagu | Madikeri | 57 | 4474.79 |
| | | Nagarahole NP | 0 | 0 |
| | | Virajpet | 16 | 464.74 |
| | | Madikeri wild life | 0 | 0 |
| 10 | Mangaluru | Karkala W.L | 0 | 0 |
| | | Kundapur | 20 | 1674.27 |
| | | Mangaluru | 36 | 4425.95 |
| 11 | Mysore | Hunsur | 19 | 813.76 |
| | | Mandya | 41 | 2201.05 |
| | | Mysore | 24 | 4705.02 |
| | | Mysore WL | 0 | 0 |
| 12 | Shimoga | Bhadravathi | 51 | 5783.955 |
| | | Sagara | 101 | 15575.25 |
| | | Shivammoga | 33 | 4523.1 |
| | | Shivammoga WL | 9 | 1396.17 |
| 13 | Canara | Kali Tiger Reserve | 0 | 0 |
| | | Haliyala | 0 | 0 |
| | | Honnavara | 1 | 2 |
| | | Karwar | 0 | 0 |
| | | Sirsi | 0 | 0 |
| | | Yellapura | 0 | 0 |
| | | **Total:** | **1156** | **216800.63** |

**Annexure-2**

**No. of Proposals pending for Sec-17 under Karnataka Forest Act-1963**

| Sl.no | Circles | Division | More than 5 Year | More than 10 Year | More than 25 Year | Number of total cases | Extent |
|---|---|---|---|---|---|---|---|
| 1 | Ballari | Ballari | 7 | 2 | 37 | 46 | 34758.2 |
| | | Chitradurga | 4 | 1 | 34 | 39 | 7110.56 |
| | | Davangere | 7 | 0 | 33 | 40 | 5888.23 |
| | | Koppal | 8 | 0 | 35 | 43 | 5824.13 |
| 2 | Belgavi | Bagalkot | 1 | 0 | 12 | 13 | 1822.53 |
| | | Gokak | 3 | 2 | 0 | 5 | 104.34 |
| | | Belgavi | 2 | 3 | 0 | 5 | 209.31 |
| | | Vijaypura | 1 | 0 | 0 | 1 | 18.63 |
| 3 | Bangalore | Bangalore Urban | 0 | 0 | 3 | 3 | 278.86 |
| | | Bangalore Rural | 2 | 4 | 1 | 7 | 945.42 |
| | | Ramnagar | 0 | 0 | 29 | 29 | 3341.53 |
| | | Kolar | 0 | 0 | 18 | 18 | 1055.29 |
| | | Chikkaballapur | 0 | 0 | 73 | 73 | 8194.07 |
| | | Bannerghatta National Park | 0 | 0 | 0 | 0 | 0 |
| 4 | Chamarajnagar | Bandipura Tiger reserve | 0 | 0 | 0 | 0 | 0 |
| | | BRT | 0 | 0 | 10 | 10 | 2305 |
| | | M.M Hills | 0 | 0 | 4 | 4 | 4097.5 |
| | | Cauvery WL | 0 | 0 | 0 | 0 | 0 |
| 5 | Chikkamagalur | Koppa | 121 | 37 | 11 | 169 | 31388.28 |
| | | Chikkamagalur | 8 | 10 | 38 | 56 | 17308.87 |
| | | Bhadra Tiger Reserve | 0 | 0 | 0 | 0 | 0 |
| 6 | Dharwad | Dharwad | 0 | 1 | 7 | 8 | 78.251 |
| | | Haveri | 0 | 0 | 4 | 4 | 187.29 |
| | | Gadag | 0 | 0 | 2 | 2 | 140.99 |
| 7 | Hassan | Hassan | 0 | 0 | 36 | 36 | 8060.24 |
| | | Tumakur | 1 | 2 | 34 | 37 | 12466.14 |
| 8 | Kalburgi | Kalburgi | 0 | 0 | 25 | 25 | 7826.24 |
| | | Raichur | 0 | 0 | 0 | 0 | 0 |
| | | Bidar | 0 | 0 | 59 | 59 | 1787.76 |
| | | Yadgir | 0 | 0 | 16 | 16 | 15562.91 |
| 9 | Kodagu | Madikeri | 0 | 0 | 57 | 57 | 4474.79 |
| | | Nagarahole NP | 0 | 0 | 0 | 0 | 0 |
| | | Virajpet | 0 | 0 | 16 | 16 | 464.74 |
| | | Madikeri wild life | 0 | 0 | 0 | 0 | 0 |
| 10 | Mangaluru | Karkala W.L | 0 | 0 | 0 | 0 | 0 |
| | | Kundapur | 0 | 0 | 20 | 20 | 1674.27 |
| | | Mangaluru | 0 | 0 | 36 | 36 | 4425.95 |
| 11 | Mysore | Hunsur | 0 | 2 | 17 | 19 | 813.76 |
| | | Mandya | 0 | 0 | 41 | 41 | 2201.05 |
| | | Mysore | 0 | 3 | 21 | 24 | 4705.02 |
| | | Mysore WL | 0 | 0 | 0 | 0 | 0 |
| 12 | Shimoga | Bhadravathi | 3 | 2 | 46 | 51 | 5783.955 |
| | | Sagara | 3 | 2 | 96 | 101 | 15575.25 |
| | | Shivammoga | 1 | 1 | 31 | 33 | 4523.1 |
| | | Shivammoga WL | 0 | 0 | 9 | 9 | 1396.17 |
| 13 | Canara | Kali Tiger Reserve | 0 | 0 | 0 | 0 | 0 |
| | | Haliyala | 0 | 0 | 0 | 0 | 0 |
| | | Honnavara | 0 | 0 | 1 | 1 | 2 |
| | | Karwar | 0 | 0 | 0 | 0 | 0 |
| | | Sirsi | 0 | 0 | 0 | 0 | 0 |
| | | Yellapura | 0 | 0 | 0 | 0 | 0 |
| | | **Total:** | **172** | **72** | **912** | **1156** | **216800.63** |

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 276 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | : | 10.12.2020 |
| ಉತ್ತರಿಸಬೇಕಾದ ಸಚಿವರು | : | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳು ಕಾರ್ಯ ನಿರ್ವಹಿಸುತ್ತವೆ; | ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 14 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಹಾಗೂ 03 ಸಮುದಾಯ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. |
| ಆ | ಶಿವಮೊಗ್ಗ ತಾಲ್ಲೂಕು ಪಿಳ್ಳಂಗೆರೆ ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಪ್ರಾರಂಭಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಕೆಯಾಗಿದೆಯೇ: | ಪ್ರಸ್ತಾವನೆಯು ಸಲ್ಲಿಕೆಯಾಗಿದೆ. |
| ಇ | ಸಲ್ಲಿಕೆಯಾಗಿದ್ದಲ್ಲಿ, ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಯಾವಾಗ ಪ್ರಾರಂಭಿಸಲಾಗುವುದು? | ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಗ್ರಾಮ ಪಂಚಾಯತಿ ವ್ಯಾಪ್ತಿಯ ಜನಸಂಖ್ಯೆಗೆ ಅನುಗುಣವಾಗಿ ಪುನರ್ ವಿಂಗಡನೆ ಮಾಡುವ ಪೈಲೆಟ್ ಯೋಜನೆಯನ್ನು ಕೈಗೊಂಡಿರುವ ಹಿನ್ನೆಲೆಯಲ್ಲಿ ಸಧ್ಯಕ್ಕೆ ಹೊಸದಾಗಿ ಯಾವುದೇ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲು ಮಂಜೂರಾತಿ ನೀಡಿರುವುದಿಲ್ಲ. |

ಸಂಖ್ಯೆ: ಆಕುಕ 161 ಎಸ್ಎಂಎಂ 2020

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 578 |
| ಸದಸ್ಯರ ಹೆಸರು | : | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸುವ ದಿನಾಂಕ | : | 10-12-2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸಕ್ತ ಸಾಲಿನಲ್ಲಿ ಹೊಸದಾಗಿ ಸರ್ಕಾರಿ ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳ ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ | ಹೊಸದಾಗಿ ಸರ್ಕಾರಿ ಪ್ರೌಢಶಾಲೆಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆ.<br><br>ಸರ್ಕಾರದ ಆದೇಶ ಸಂಖ್ಯೆ:ಇಡಿ 132 ಪಿಬಿಎಸ್ 2018 ದಿನಾಂಕ:20-03-2018ರಲ್ಲಿ ರಾಜ್ಯದಲ್ಲಿರುವ ಹಾಲಿ ನಡೆಯುತ್ತಿರುವ ಮೂಲಭೂತ ಸೌಕರ್ಯಗಳನ್ನು ಹೊಂದಿರುವ ಸರ್ಕಾರಿ ಪ್ರೌಢ ಶಾಲೆಗಳನ್ನು ಉನ್ನತೀಕರಿಸಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ವ್ಯವಹರಣೆಯಲ್ಲಿದೆ. |
| ಆ) | ಪಿರಿಯಾಪಟ್ಟಣ ಮತ ಕ್ಷೇತ್ರದ ಕಂಪಲ್ಲಾಪುರ, ಮಾಕೋಡು, ಕೊಪ್ಪ ಗ್ರಾಮದ ವಿದ್ಯಾರ್ಥಿಗಳು ಪದವಿ ಪೂರ್ವ ಶಿಕ್ಷಣ ಪಡೆಯಲು ದೂರದ ಗ್ರಾಮ ಹಾಗೂ ಪಟ್ಟಣಗಳಿಗೆ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಹಾಗಿದ್ದಲ್ಲಿ, ಸರ್ಕಾರ ಈ ಪಿರಿಯಾಪಟ್ಟಣ ಮತ ಕ್ಷೇತ್ರದ ಕಂಪಲ್ಲಾಪುರ, ಮಾಕೋಡು, ಕೊಪ್ಪ ಗ್ರಾಮಗಳಿಗೆ ಸರ್ಕಾರಿ ಪದವಿ ಪೂರ್ವ ಕಾಲೇಜು ಸ್ಥಾಪನೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ಕಂಪಲ್ಲಾಪುರ, ಮಾಕೋಡು, ಕೊಪ್ಪ ಗ್ರಾಮಗಳಿಗೆ ಸರ್ಕಾರಿ ಪದವಿ ಪೂರ್ವ ಕಾಲೇಜು ಸ್ಥಾಪನೆ ಮಾಡುವ ಕುರಿತಂತೆ ಮೂಲಭೂತ ಸೌಕರ್ಯ ಹೊಂದಿಸಿಕೊಂಡಿರುವ ಬಗ್ಗೆ ವರದಿ ನೀಡಲು ಜಿಲ್ಲಾ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರಿಂದ ವರದಿ ನಿರೀಕ್ಷಿಸಲಾಗಿದೆ ಎಂದು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ವರದಿಸಿದ್ದು, ಈ ಬಗ್ಗೆ ಸೂಕ್ತ ಪ್ರಸ್ತಾವನೆ ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಈ) | ಕಾಲೇಜುಗಳ ಸ್ಥಾಪನೆಯ ಬಗ್ಗೆ ಸರ್ಕಾರದ ಕ್ರಮವೇನು? | |

ಸಂಖ್ಯೆ: ಇಪಿ 178 ಡಿಜಿಡಬ್ಲ್ಯೂ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | :581 |
| ಮಾನ್ಯ ಸದಸ್ಯರ ಹೆಸರು | :ಶ್ರೀ ರಾಜಕುಮಾರ್ ಪಾಟೀಲ್ (ಸೇಡಂ) |
| ಉತ್ತರಿಸಬೇಕಾದ ದಿನಾಂಕ | :10.12.2020 |
| ಉತ್ತರಿಸುವ ಸಚಿವರು | : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸೇಡಂ ಮತ ಕ್ಷೇತ್ರದಲ್ಲಿ ಕೋವಿಡ್-19 ರಿಂದಾಗಿ ಆಸ್ಪತ್ರೆಗೆ ದಾಖಲಾಗಿರುವವರ ಸಂಖ್ಯೆ ಎಷ್ಟು; ಗುಣಮುಖರಾದವರ ಸಂಖ್ಯೆ ಹಾಗೂ ಮರಣ ಹೊಂದಿರುವವರ ಸಂಖ್ಯೆ ಎಷ್ಟು; | ದಿನಾಂಕ:23.06.2020ರ ಅಧಿಸೂಚನೆ ಸಂಖ್ಯೆ: ಆಕುಕ 228 ACS 2020ರನ್ವಯ ಖಾಸಗಿ ಆಸ್ಪತ್ರೆಗಳಲ್ಲಿ ಕೋವಿಡ್ ಚಿಕಿತ್ಸೆ ನೀಡಲು ಅವಕಾಶವಿರುತ್ತದೆ. ಈ ಆದೇಶದ ದಿನಾಂಕದಿಂದ ಸೇಡಂ ಮತಕ್ಷೇತ್ರದಲ್ಲಿ ಕೋವಿಡ್-19 ರಿಂದಾಗಿ ಆಸ್ಪತ್ರೆಗೆ ದಾಖಲಾಗಿರುವವರ ಸಂಖ್ಯೆ-100, ಗುಣಮುಖರಾದವರು-74, ಹಾಗೂ ಮರಣ ಹೊಂದಿರುವವರ ಸಂಖ್ಯೆ-4. |
| ಆ | ಇಲ್ಲಿಯವರೆಗೆ ಸದರಿ ಚಿಕಿತ್ಸೆಗಾಗಿ ಸೇಡಂ ಮತ ಕ್ಷೇತ್ರಕ್ಕೆ ಎಷ್ಟು ಮೊತ್ತವನ್ನು ಖರ್ಚು ಮಾಡಲಾಗಿದೆ:(ವಿವರ ನೀಡುವುದು) | ಇಲ್ಲಿಯವರೆಗೆ ಸದರಿ ಚಿಕಿತ್ಸೆಗಾಗಿ ಸೇಡಂ ಮತಕ್ಷೇತ್ರಕ್ಕೆ ರೂ.4.72 ಲಕ್ಷ ಗಳು ವೆಚ್ಚ ಮಾಡಲಾಗಿದೆ: ವಿವರ ಅನುಬಂಧದಲ್ಲಿ ಲಗತ್ತಿಸಿದೆ. |

ಆಕುಕ 166 ಎಸ್ಎಂಎಂ 2020

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

